

## ಡಿ. ಎಸ್. ಚೌಗಲೆ

'ಗಾಂಧಿ ವಿರುದ್ಧ ಗಾಂಧಿ' ನಾಟಕದ ಮೂಲಕ ಕನ್ನಡ ಸಾಹಿತ್ಯಲೋಕದಲ್ಲಿ ಹೆಸರು ಮಾಡಿದ ಡಿ.ಎಸ್. ಚೌಗಲೆ ಬಹುಮುಖ ಪ್ರತಿಭೆ ಹೊಂದಿದವರು. ಬೆಳಗಾವಿಯ ಬಿ.ಕೆ. ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾದ ಡಿ.ಎಸ್. ಚೌಗಲೆ ಅಪ್ಪಟ ಗ್ರಾಮೀಣ ಪ್ರತಿಭೆ. ಚಿಕ್ಕೋಡಿ ತಾಲ್ಲೂಕಿನ ಬೇಡಕಿಹಾಳದ ಮಧ್ಯಮ ವರ್ಗದ ರೈತ ಕುಟುಂಬದಲ್ಲಿ ಜನಿಸಿದ ಚೌಗಲೆ ಚಿತ್ರಕಲೆ ಮತ್ತು ಬರವಣಿಗೆಯನ್ನು ಆತ್ಮಸಾತ್ ಮಾಡಿಕೊಂಡವರು. ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಎಂ.ಎ. ಪದವಿ ಗಳಿಸಿದ ಬಳಿಕ ಕನ್ನಡ ಅಧ್ಯಾಪನ ವೃತ್ತಿ ಕೈಗೊಂಡ ಇವರು ಚಿತ್ರಕಲೆಯನ್ನು ಸ್ವಂತ ಕಲಿಕೆಯಿಂದ ಪಡೆದವರು.

ಕಲೆಯ ಯಾವುದೇ ಸಿದ್ಧಾಂತಗಳಿಗೆ ಜೋತು ಬೀಳದೆ ಎಲ್ಲ ಪ್ರಕಾರದಲ್ಲೂ ಕಲೆಯನ್ನು ದುಡಿಸಿಕೊಳ್ಳುವ ಚೌಗಲೆ ಪೊರ್ಟ್ರೇಟ್ ರಚನೆಯಲ್ಲಿ ನಿಷ್ಣಾತರು.

ಕವಿ, ಕತೆಗಾರ, ಕಲಾವಿದ ಮತ್ತು ಚಿತ್ರಕಲಾ ಬರವಣಿಗೆಯನ್ನು ತನ್ನದು ಮಾಡಿಕೊಂಡ ಚೌಗಲೆಯವರ ಸಾಧನೆ ಅಪರೂಪವೆಂದೇ ಹೇಳಬೇಕು. ಕಳೆದ ಹಲವಾರು ವರ್ಷಗಳಿಂದ 'ಪ್ರಜಾವಾಣಿ'ಯಲ್ಲಿ ಚಿತ್ರಕಲೆಯ ಬರವಣಿಗೆಯನ್ನು ನಡೆಸಿಕೊಂಡು ಬಂದ ಡಿ.ಎಸ್. ಚೌಗಲೆಯವರ ಅನುವಾದಿತ ಕಾದಂಬರಿ 'ನೆರಳುಗಳು' ಸುಧಾ ವಾರಪತ್ರಿಕೆಯಲ್ಲಿ ಧಾರವಾಹಿಯಾಗಿ ಹರಿದು ಬಂತು. 'ಗಾಂಧಿ ವಿರುದ್ಧ ಗಾಂಧಿ' ನಾಟಕವನ್ನು ಕನ್ನಡಕ್ಕೆ ತಂದು ಕನ್ನಡ ರಂಗಭೂಮಿಗೆ ನವಚೇತನ ನೀಡಿದ ಚೌಗಲೆಯವರ ಈ ನಾಟಕ 'ರಂಗಾಯಣ'ದಿಂದ ಪ್ರದರ್ಶನ ಕಾಣುತ್ತ ರಂಗಾಸಕ್ತರ, ವಿಮರ್ಶಕರ, ಬುದ್ಧಿಜೀವಿಗಳ ಹಾಗೂ ಜನಸಾಮಾನ್ಯರ ಮೆಚ್ಚುಗೆಗೆ ಮತ್ತು ಚರ್ಚೆಗೆ ಒಳಗಾಗಿದೆ.

ಚಿತ್ರಕಲೆಯಲ್ಲಿ ಮೂರ್ತ, ಅಮೂರ್ತ ಎರಡರಲ್ಲೂ ತಮ್ಮದೇ ಆದ ಕ್ರಮವನ್ನು ರೂಢಿಸಿಕೊಂಡ ಡಿ.ಎಸ್. ಚೌಗಲೆ ಅಪರೂಪದ ಬಹುಮುಖ ವ್ಯಕ್ತಿತ್ವದ ಲೇಖಕ, ಕಲಾವಿದ.

# ಬಿ. ಕೆ. ಹುಬಳಿ

# B. K. HUBLI

ಡಿ. ಎಸ್. ಚೌಗಲೆ

D. S. CHOUGALE



ಕರ್ನಾಟಕ ಲಲಿತಕಲಾ ಅಕಾಡೆಮಿ
ನೃಪತುಂಗ ರಸ್ತೆ, ಬೆಂಗಳೂರು - ೫೬೦ ೦೦೧.

**Karnataka Lalithakala Academy**
14/3, Nrupatunga Road, Bangalore - 560 001

**B. K. HUBLI:** A Monograph on the life and works of B.K. Hubli.
Author: D.S. Chougale, Published by H. Shankarappa, Registrar
Karnataka Lalithakala Academy, Nrupathunga Road
Bangalore-560 001.

Pages : 96

First Edition : 1999

**Price : Rs. 25/-**

*ಪ್ರಧಾನ ಸಂಪಾದಕರು*
ಪ್ರೊ|| ಅಂದಾನಿ ವಿ.ಜಿ.

*ಪ್ರಕಟಣಾ ಸಮಿತಿ*
ಡಾ|| ಹೆಚ್. ಚಂದ್ರಶೇಖರ
ಶ್ರೀ ಮಧು ದೇಸಾಯಿ
ಶ್ರೀಮತಿ ರಜನಿ ಪ್ರಸನ್ನ
ಶ್ರೀ ಕೆ. ಎಸ್. ವಿಶ್ವಂಬರ
ಶ್ರೀ ಬಸವರಾಜ ಎಸ್. ಮುಸಾವಳಗಿ

*ಪ್ರಕಾಶಕರು*
ಶ್ರೀ ಎಚ್. ಶಂಕರಪ್ಪ
ರಿಜಿಸ್ಟ್ರಾರ್

*ಮುದ್ರಣ*
**ಅನುಭವ ಪ್ರಿಂಟರ್ಸ್**
ರಾಜಾಜಿನಗರ, ಬೆಂಗಳೂರು-10
✆ : 3401577, 2204868

# ಅಧ್ಯಕ್ಷರ ನುಡಿ

ಕರ್ನಾಟಕ ಲಲಿತಕಲಾ ಅಕಾಡೆಮಿಯ ಪ್ರಮುಖ ಕಾರ್ಯಕ್ರಮಗಳಲ್ಲಿ ಹಿರಿಯ ಹಾಗೂ ಸಮಕಾಲೀನ ಕಲಾವಿದರುಗಳ ಪರಿಚಯಾತ್ಮಕ ಪುಸ್ತಕ ಪ್ರಕಟಿಸುವುದು ಒಂದು. ಈ ಪುಸ್ತಕಗಳ ಮೂಲಕ ಕರ್ನಾಟಕದ ಪ್ರಾದೇಶಿಕ ಕಲಾ ಚಟುವಟಿಕೆಗಳ ಕಲಾ ಬೆಳವಣಿಗೆ, ಮತ್ತು ಕಲಾವಿದರ ಪರಿಚಯ ಮಾಡಿಕೊಡುವದರ ಜೊತೆಗೆ, ಇಡಿಯಾಗಿ ಕರ್ನಾಟಕದ ಕಲೆ ಬೆಳೆದು ಬಂದ ಬಗ್ಗೆ ಪರಿಚಯ ಮಾಡಿಕೊಡುವುದು ಈ ಪ್ರಕಟಣೆಗಳ ಮುಖ್ಯ ಉದ್ದೇಶವಾಗಿದೆ. ಈ ಮಾಲೆಯ ಕೃತಿಗಳು ಅತ್ಯಂತ ಜನಪ್ರಿಯವಾಗಿವೆ. ಈಗಾಗಲೇ ಕೆಲವು ಕೃತಿಗಳು ಮರು ಮುದ್ರಣ ಕಂಡಿರುವುದು ಇದಕ್ಕೆ ಸಾಕ್ಷಿ.

ಈಗಾಗಲೇ ಹಲವು ಕಲಾವಿದರುಗಳ ಪರಿಚಯಾತ್ಮಕ ಹೊತ್ತಿಗೆಗಳು ಹೊರಬಂದಿವೆ. ಈಗ ಬಿಡುಗಡೆ ಆಗುತ್ತಿರುವ ಕಿರುಹೊತ್ತಿಗೆಯು ಮುಂಬಯಿಯ ಜೆ.ಜೆ. ಕಲಾಶಾಲೆಯ ಗುಂಪಿಗೆ ಸೇರಿದ ಹಾಗೂ ಹಿಂದಿನ ಹಾಗೂ ಇಂದಿನ ಪೀಳಿಗೆಗೆ ಹಿರಿಯರಾದ ಶ್ರೀ ಬಿ.ಕೆ. ಹುಬಳಿ ಅವರನ್ನು ಕುರಿತದ್ದು. ಅವರ ಜೀವನ ಮತ್ತು ಕಲಾಕೃತಿಗಳನ್ನು ಕುರಿತಂತೆ ಶ್ರೀ ಚೌಗಲೆಯವರು ಅತ್ಯಂತ ಶ್ರಮವಹಿಸಿ ಅನೇಕ ವಿಷಯಗಳನ್ನು ಪರಿಚಯ ಮಾಡಿಕೊಟ್ಟಿದ್ದಾರೆ. ಅವರಿಗೆ ನಮ್ಮ ಧನ್ಯವಾದಗಳು. ಈ ಪುಸ್ತಕದ ಸುಂದರವಾದ ವಿನ್ಯಾಸವನ್ನು ಮಾಡಿರುವ ಅಕಾಡೆಮಿಯ ಸದಸ್ಯರಾದ ಶ್ರೀ ಬಸವರಾಜ ಮುಸಾವಳಗಿ ಹಾಗೂ ಕರಡನ್ನು ತಿದ್ದಿ ಮುದ್ರಣದ ಮೇಲ್ವಿಚಾರಣೆಯನ್ನು ನೋಡಿಕೊಂಡ ಮತ್ತೊಬ್ಬ ಸದಸ್ಯರಾದ ಡಾ|| ಹೆಚ್. ಚಂದ್ರಶೇಖರ ಅವರಿಗೆ ಅಕಾಡೆಮಿಯ ಪರವಾಗಿ ವಂದನೆಗಳು. ಇದನ್ನು ಅಂದವಾಗಿ ಮುದ್ರಿಸಿಕೊಟ್ಟ ಅನುಭವ ಪ್ರಿಂಟರ್ಸ್, ಬೆಂಗಳೂರು ಇವರಿಗೆ ಧನ್ಯವಾದಗಳು.

ಕಲಾವಿದರು, ಕಲಾ ರಸಿಕರು ಮತ್ತು ಸಾಹಿತ್ಯಾಭಿಮಾನಿಗಳು ಅಕಾಡೆಮಿಯ ಪ್ರಯತ್ನವನ್ನು ಸ್ವಾಗತಿಸುವರೆಂದು ಆಶಿಸುತ್ತೇನೆ.

**ಪ್ರೊ: ಅಂದಾನಿ ವಿ. ಜಿ.**
*ಅಧ್ಯಕ್ಷರು*
*ಕರ್ನಾಟಕ ಲಲಿತಕಲಾ ಅಕಾಡೆಮಿ*

# ಬಿ. ಕೆ. ಹುಬಳಿ

ಭಾರತೀಯ ಚಿತ್ರಕಲೆಗೆ ಪ್ರಪಂಚದಲ್ಲಿ ವಿಶಿಷ್ಟ ಸ್ಥಾನವಿದೆ. ಸಾವಿರಾರು ವರ್ಷಗಳ ವೈವಿಧ್ಯಮಯ ಸಂಸ್ಕೃತಿ, ನಾಗರಿಕತೆ ಮತ್ತು ಪರಂಪರೆ ಹೊಂದಿದ ನೆಲವೀಡು ಭಾರತ. ಹೀಗಾಗಿ ಇಲ್ಲಿಯ ಕಲೆಗೆ ಹತ್ತು ಹಲವು ಮುಖಗಳು. ಈ ಪರಂಪರೆ ಆದಿಮಾನವನಿಂದ ಆರಂಭಗೊಂಡು ಇಂದಿನ ಆಧುನಿಕ ಮನುಷ್ಯನ ತನಕ ಹಾಸಿಕೊಂಡಿದೆ. ಉನ್ನತ ಕಲಾವಂತಿಕೆ ಭಾರತೀಯ ಕಲೆಯ ಮೂಲ ಗುಣ. ವಿಭಿನ್ನ ಧರ್ಮ, ನಡುವಳಿಕೆ, ಆಚರಣೆ ನಮ್ಮ ಕಲೆಯನ್ನೆ ಶ್ರೀಮಂತಗೊಳಿಸಿವೆ. ಬಹುಶಃ ಇಲ್ಲಿರುವಷ್ಟು ಸಂಕೀರ್ಣವಾದ ವೈವಿಧ್ಯಮಯ ಬದುಕು, ರೂಢಿ, ಜಗತ್ತಿನಲ್ಲಿ ಇನ್ನೆಲ್ಲಿಯೂ ಸಿಗದು. ಅದಕ್ಕೆ ಇಲ್ಲಿಯ ಪ್ರಾಚೀನ ಕಲೆಯು ಇಂದಿನ ಅಧುನಿಕ ಕಲೆಯವರೆಗೆ ಹಲವು ಶೈಲಿ, ತಂತ್ರ, ಸಿದ್ಧಾಂತಗಳನ್ನು ಒಳಗೊಂಡು ಬೆಳೆಯುತ್ತ ಬಂದಿದೆ. ಸಮೃದ್ಧಗೊಂಡಿದೆ.

ಕೆಲವು ಕಲಾವಿದರು ಪಾಶ್ಚಾತ್ಯ ಸಿದ್ಧಾಂತಗಳಿಗೆ ಜೋತುಬಿದ್ದು ಆ ನೆಲೆಯಲ್ಲಿ ತಮ್ಮನ್ನು ಗುರುತಿಸಿಕೊಳ್ಳುತ್ತಿದ್ದರೆ; ಇನ್ನು ಹಲವರು ಭಾರತೀಯತ್ವದ ದೇಶಿ ಸೊಗಡನ್ನು ಬೆಳೆಸಿಕೊಂಡರು. ಮತ್ತೊಂದು ಕಲಾವರ್ಗವು ಎರಡರ ಅಧ್ಯಯನದ ಸಮನ್ವಯ ಸಾಧಿಸಿ ಹೊಸ ಹೊಸ ಅಲೋಚನೆ, ಚಿಂತನೆಯನ್ನು ತಮ್ಮ ಕಲೆಯ ಅಭಿವ್ಯಕ್ತಿಯ ಮೂಲಕ ಪ್ರಕಟಿಸುತ್ತ ಖ್ಯಾತಿಪಡೆಯಿತು. ಅಷ್ಟೇಯಾಕೆ ಗ್ರಾಮೀಣ ಬದುಕನ್ನು ಚಿತ್ರಿಸುತ್ತ ಅಲ್ಲಿಯ ಜಾತ್ರೆ, ಅರ್ಚನೆ, ನಂಬಿಕೆಯ ಜನಪದೀಯ ಅಂಶವನ್ನು ಕಲೆಗೆ ಪ್ರಯೋಗವಾಗಿ ಬಳಸಿದವರೂ ಇದ್ದಾರೆ. ಈ ಬಗೆಯ ವಿಷಯ ಎತ್ತಿಕೊಂಡು ವಾಸ್ತವ ನೆಲೆಯಲ್ಲಿ ಅಭಿವ್ಯಕ್ತಿ ಸಾಧಿಸಿ, ನಾವಿನ್ಯತೆ ಮತ್ತು ಪ್ರಯೋಗಶೀಲ ಗುಣಗಳಿಂದ ಗಮನಾರ್ಹ ಕೃತಿಗಳನ್ನು ರಚಿಸಿದವರ ಸಾಲಿಗೆ ಕರ್ನಾಟಕದ ಹಿರಿಯ ಕಲಾವಿದ, ಎಪ್ಪತ್ತಾರರ ಹರೆಯದ ಬಿ.ಕೆ.ಹುಬಳಿ ಸೇರುತ್ತಾರೆ.

**ಮನೆತನ ಮತ್ತು ಜನನ**

ಬಿ.ಕೆ. ಹುಬಳಿಯವರ ಮೂಲ ಊರು ಬೆಳಗಾವಿ ಜಿಲ್ಲೆ

ಬೈಲಹೊಂಗಲ ತಾಲ್ಲೂಕಿನ ಮುಗುಟಖಾನ ಹುಬಳಿ. ಪುಣೆ-ಬೆಂಗಳೂರು ರಾಷ್ಟ್ರೀಯ ಹೆದ್ದಾರಿ ಪಕ್ಕದಲ್ಲಿ ಮಲಪ್ರಭಾ ನದಿ ದಂಡೆಯ ಮೇಲೆ ಹಸಿರು ಹೊದ್ದು ಮಲಗಿದ ಈ ಹಳ್ಳಿ ಎಂ.ಕೆ.ಹುಬಳಿ ಎಂದೇ ಖ್ಯಾತಿ ಹೊಂದಿದೆ. ಬಿ.ಕೆ.ಯವರ ತಂದೆ ಕರವೀರಪ್ಪ ಹುಬಳಿ ತಮ್ಮ ಕುಲಕಸುಬು 'ಪತ್ತಾರಕಿ' (ಅಕ್ಕಸಾಲಿಗ ವೃತ್ತಿ) ಮಾಡಲು ಬೆಳಗಾವಿಗೆ ಬಂದರು. ಹೀಗಾಗಿ ಹುಬಳಿ ಅಡ್ಡ ಹೆಸರು ಹುಬಳಿಯವರ ಮನೆತನಕ್ಕೆ ಉಳಿದುಕೊಂಡಿತು.

ಕರವೀರಪ್ಪನವರು ತಮ್ಮ ವೃತ್ತಿಯನ್ನು ಬೆಳಗಾವಿಯ ಶಹಾಪುರದ ಜೇಡಗಲ್ಲಿಯಲ್ಲಿ ಆರಂಭಿಸಿದರು. ಅಂದಿನ ಸ್ವಾತಂತ್ರ್ಯ ಪೂರ್ವದ ಶಹಾಪೂರ, ಸಾಂಗ್ಲಿ ಸಂಸ್ಥಾನಿಕರ ಆಡಳಿತಕ್ಕೆ ಒಳಪಟ್ಟಿತ್ತು. ಪಕ್ಕದಲ್ಲಿರುವ ವಡಗಾವ ಕುರುಂದವಾಡ ಸರಕಾರದ ಆಧೀನ (ಸದ್ಯ ಶಹಾಪೂರ ಮತ್ತು ವಡಗಾವಗಳು ಬೆಳಗಾವಿಯ ಉಪನಗರಗಳು). ಕರವೀರಪ್ಪನವರು ಹತ್ತಿರದ ಯಳ್ಳೂರಿನ ತಮ್ಮ ವಿಶ್ವಕರ್ಮ ಕೋಮಿನ ಬಸವಂತಪ್ಪ ಸುತಾರ ಎನ್ನುವವರ ಮಗಳಾದ ಸುಂದರಾಬಾಯಿ ಅವರನ್ನು ಮದುವೆಯಾದರು. ಕರವೀಶಪ್ಪ ಮತ್ತು ಸುಂದರಾಬಾಯಿ ದಂಪತಿಗಳ ಚೊಚ್ಚಲು ಕರುಳು ಕುಡಿಯಾಗಿ ಬಾಲಕೃಷ್ಣ ಕರವೀರಪ್ಪ ಹುಬಳಿ ದಿ: ೧೧.೧೦.೧೯೨೨ರಂದು ತಾಯಿಯ ತವರುಮನೆಯಾದ ಯಳ್ಳೂರಿನಲ್ಲಿ ಜನಿಸಿದರು.

ಹುಬಳಿಯವರದು ತುಂಬು ಕುಟುಂಬ. ಅವರು, ಸೋದರಿ ಗಂಗೂತಾಯಿಯವರನ್ನು ತೀರ ಹಚ್ಚಿಕೊಂಡಿದ್ದರು. ಜನಾರ್ಧನ ಮತ್ತು ಜಗನ್ನಾಥ ಎಂಬ ತಮ್ಮಂದಿರು ಇದ್ದರೂ ತಂಗಿಯ ಮೇಲೆ ಎಲ್ಲಿಲ್ಲದ ವಾತ್ಸಲ್ಯ. ಗಂಗೂತಾಯಿ ಸಹ ಅಣ್ಣನ ಆಶೋತ್ತರಗಳನ್ನು ಈಡೇರಿಸುವುದಕ್ಕೆ ಬಹಳಷ್ಟು ಸಹಕರಿಸುತ್ತಿದ್ದಳು.

## ಬಾಲ್ಯ ಜೀವನ, ಶಿಕ್ಷಣ

ಚಿಕ್ಕಂದಿನಲ್ಲಿಯೇ ಗೆರೆಯೆಳೆದು ರೇಖೆಗಳಿಗೆ ಕಲೆಯ ಜೀವ ತುಂಬುವ ಆಸಕ್ತಿ ಬಿ.ಕೆ. ಹುಬಳಿಯವರಲ್ಲಿ ಹುಟ್ಟಿಕೊಂಡಿತು. ಮೊದಲ ಇಯತ್ತೆಯಲ್ಲಿ ಶಾಲೆಗೆ ಹೋದಾಗ ಚಿತ್ರ ಬರೆಯತೊಡಗಿದರು. ಬಿ.ಕೆ.ಯವರದ್ದು ಇಳಿವಯಸ್ಸಿನಲ್ಲೂ ಹಚ್ಚಹಸಿರಾದ ನೆನಪು. ಬಾಲ್ಯದ ಬುತ್ತಿ ಬಿಚ್ಚಿ ಹೇಳಲು ಶುರುಮಾಡಿದರು - "ಶುಕ್ರವಾರ ಲಕ್ಷ್ಮೀ ಪೂಜೆ ಮಾಡುವಾಗ ಪಾಟಿಮ್ಯಾಲ ಚಿತ್ರ ತೆಗೀತಾ ಕೂರತ್ತಿದ್ದೆ. ಸುರುವಾತಿನಲ್ಲಿ ಚಿತ್ರ ಸರಿ ಬರುತ್ತಿರಲಿಲ್ಲ.

ಬರಬರತಾ ಛಂದ ಕಾಣಾಕ ಹತ್ತಿದವು"... ತುಂಬು ಉತ್ಸಾಹದಿಂದ ಗೀಚಿದ ಮೊದಲ ಗೆರೆಗಳನ್ನು ಥಾಳಾಗಿ ನೆನೆದು ಮೆಲುಕು ಹಾಕುತ್ತಾರೆ ಹುಬಳಿ.

ಬಿ.ಕೆ. ಯವರ ತಂದೆ ಕರವೀರಪ್ಪನವರು ಹೆಸರಾಂತ ಚಿನ್ನದ ಗುಂಡಗಡಗಿ (ಕರಡಗಿ) ಕಲಾವಿದರು. ಉತ್ತರ ಕರ್ನಾಟಕದಲ್ಲಿ ಚಿನ್ನದ ಕರಡಗಿ ಅಂದರೆ ಕರವೀರಪ್ಪನವರ ಹೆಸರು ಕೇಳಿ ಬರುತ್ತಿತ್ತು. ಇಂದಿಗೂ ಚಿನ್ನದ ಕರಡಗಿ ಮಾಡುವುದನ್ನು ಹುಬಳಿಯವರ ಮನೆತನ ಮುಂದುವರೆಸಿಕೊಂಡು ಬಂದಿದೆ. ಕರಡಗಿ ಎಷ್ಟೊಂದು ಕರವೀರಪ್ಪನವರಿಗೆ ಅನ್ವರ್ಥಕವಾಗಿ ಬಿಟ್ಟಿತ್ತೆಂದರೆ ಇವತ್ತಿಗೂ ಕರಡಗಿ ಮಾಡಿಸಲು ಬಂದವರು "ಕರವೀರಪ್ಪನವರ"....ಎಂದು ಕೂಗಿ ಕರೆದು ಕರಡಗಿ ಮಾಡುವ ವಿಚಾರ ಹೇಳುತ್ತಾರೆ. ಅಷ್ಟೊಂದು ಅನ್ಯೋನ್ಯ ಸಂಬಂಧ ಕರಡಿಗೆಗೆ ಮತ್ತು ಹೆಸರಿಗೆ ಉಳಿದುಕೊಂಡು ಬಿಟ್ಟಿದೆ.

ಬಾಲ್ಯದಲ್ಲಿ ಬಿ.ಕೆ.ಹುಬಳಿಯವರ ಮೇಲೆ ತಂದೆಯ ಪ್ರಭಾವ ಆಗಿದೆ. ಕರಡಗಿಯ ಮೇಲೆ ಅವರ ತಂದೆ ಸೂಕ್ಷ್ಮ ವಿನ್ಯಾಸ, ಕೆತ್ತನೆ ಮಾಡುತ್ತಿದ್ದರು. ಬಾಲಕ ಹುಬಳಿ ಈ ಕಾಯಕವನ್ನು ಏಕಚಿತ್ತದಿಂದ ಗಮನಿಸಿ ತಾವು ವಿನ್ಯಾಸಕ್ಕಿಳಿಯುತ್ತಿದ್ದರು. ಹೀಗೆ ತಂದೆಯವರಿಂದ ಪ್ರೇರಣೆ ಪಡೆದರು. ವಿಶ್ವಕರ್ಮ ಜನರಿಗೆ ಅರ್ಕಸಾಲಿ ವೃತ್ತಿ, ಬಡಗಿತನ, ಕಂಬಾರ ವೃತ್ತಿಗಳು ಸ್ವಾಭಾವಿಕವಾಗಿ ಬಂದೇ ಬರುತ್ತವೆ. ಕರವೀರಪ್ಪನವರು ಇದರಿಂದ ಹೊರತಾಗಿರಲಿಲ್ಲ. ಅವರಿಗೂ ಈ ವೃತ್ತಿಗಳ ಆಳವಾದ ಜ್ಞಾನವಿತ್ತು. ಇದನ್ನು ಬಳುವಳಿಯಾಗಿ ಬಿ.ಕೆ.ಹುಬಳಿ ಸ್ವೀಕರಿಸಿದರು.

ಈ ವ್ಯವಸಾಯ ನಿಮಿತ್ತ ಬಿ.ಕೆ. ಯವರ ತಂದೆಯ ಬಳಿ ಬಹಳಷ್ಟು ಜನ ವೃತ್ತಿಪರರು, ಕಲಾವಿದರು ಬರುತ್ತಿದ್ದರು. ಅಂಥವರಲ್ಲಿ ಪ್ರಸಿದ್ಧ ಮೂರ್ತಿಕಾರರು, ಶಿಲ್ಪಕಲಾವಿದರು ಇರುತ್ತಿದ್ದರು. ಈ ಸಾಲಿನಲ್ಲಿ ಹುದಲಿಯ ಗೋವಿಂದ ಪತ್ತಾರ ಹಾಗೂ ಬೈಲಹೊಂಗಲದ ಈರಪ್ಪ ಬಡಿಗೇರ ಪ್ರಮುಖರು. ಗೋವಿಂದ ಪತ್ತಾರರು ಗೋವಾದ ಪ್ರಖ್ಯಾತ ಮಂಗೇಶ ದೇವರ ಚಿನ್ನದ ಮೂರ್ತಿ ತಯಾರಿಸಿದ ಕಲಾವಿದರು. ಹುಬಳಿಯವರಿಗೆ ಇಂಥವರ ಸಹವಾಸ, ಮಾರ್ಗದರ್ಶನ ಸಿಕ್ಕಿತು. ಅವರಿಂದ ಬಹಳಷ್ಟು ಅರಿತರು.

## ಆಂಜನೇಯ ಮತ್ತು ಕೃಷ್ಣನ ಚಿತ್ರ

ಶನಿವಾರ ಆಂಜನೇಯ ಅರ್ಚನೆ. ಆಂಜನೇಯನ ಚಿತ್ರಗಳನ್ನು ಬರೆಯಲು ತೊಡಗಿದರು. ಆರಂಭದಲ್ಲಿ ಚಿತ್ರ ಸರಿ ಬರದಿದ್ದರೂ ಕ್ರಮೇಣ ರೇಖೆಗಳ ಮೇಲೆ ಹಸ್ತ ನಿಯಂತ್ರಣ ದಕ್ಕಿತು. ಅವರಿಗೆ ಬಾಲ್ಯದಲ್ಲಿ ಬಹಳಷ್ಟು ಕಾಡಿದ ಇನ್ನೊಂದು ಚಿತ್ರ ಕೃಷ್ಣನದು. ಅದನ್ನು ಬಿ.ಕೆ.ಯವರ ನುಡಿಗಳಲ್ಲೇ ಕೇಳಬೇಕು. "ಸಂಬಂಧಿಕರ ಹುಡುಗನೊಬ್ಬ ಭಾಳ ಛಂದ ಕೃಷ್ಣನ ಚಿತ್ರ ತೆಗೀತಿದ್ದ. ಒಮ್ಮೆ ಕಾಳಿಂಗ ಮರ್ದನ ಬಿಡಿಸಿದ. ಅದನ್ನ ನೋಡಿ ನನಗೂ ಚಿತ್ರ ತೆಗಿಯೋ ಹಂಗಾತು. ಅದನ್ನ ನೋಡಿ ನಾನೂ ಬಿಡಿಸಿದೆ. ಪ್ಯಾಟ್ಯಾಗಿನ ಟಿಕಳಿ ತಂದು ಕೊಳ್ಳಾಗಿನ ಮಾಲಿ ಮಾಡಿದೆ. ಕಿರೀಟಾನು ಬರೆದೆ. ಭಾಳ ಛಂದಾತು. ಅವತ್ತೇನು ಕೃಷ್ಣ ಮನದೊಳಗೆ ಕುಂತಾನೋ ಇನ್ನೂ ತನಕ ಇದಾನ. ಕೃಷ್ಣನ ಚಿತ್ರ ಬರೆಯುವುದು ಅಂದರ ನನಗೆ ಭಾಳ ಪ್ರೀತಿ" ಎನ್ನುತ್ತಾರೆ ಬಿ.ಕೆ.ಯವರು. ಕೃಷ್ಣನ ವಿಷಯ ಎತ್ತಿಕೊಂಡು ಸಾಕಷ್ಟು ಕೃತಿಗಳನ್ನು ನಂತರದ ದಿನಗಳಲ್ಲಿ ಚಿತ್ರಿಸಿದ್ದಾರೆ.

## ತಾಯಿಯ ತವರು ಯಳ್ಳೂರಿಗೆ

ಚಿತ್ರ ರೇಖೆಗಳ ವಿನ್ಯಾಸ ಸೃಷ್ಟಿಯ ಹುಚ್ಚು ಅಮಲಿನಲ್ಲಿ ವಿದ್ಯಾಭ್ಯಾಸದತ್ತ ಗಮನ ಹರಿಯುವುದು ಕಡಿಮೆಯಾಯಿತು. 'ಚಿತ್ರಬರೆದು ಮಗ ಕೆಟ್ಟ ಹೋಗತಾನ' ಎಂದರಿತ ಹುಬಳಿಯವರ ತಂದೆ ಕರವೀರಪ್ಪನವರು ಬಿ.ಕೆ.ಯವರನ್ನು ಯಳ್ಳೂರಿಗೆ ಕಳಿಸಲು ತೀರ್ಮಾನಿಸಿದರು. ಮಗ ಸೋದರಮಾವನ ಹೆದರಿಕೆಯ ನೆರಳಲ್ಲಿ ನಾಲ್ಕು ಅಕ್ಷರ ಕಲಿಯಬಹುದೆಂಬ ನಂಬಿಕೆ ತಂದೆಯವರದಾಗಿತ್ತು. ಸೋದರ ಮಾವ ಬಾಬುರಾವ ಬಸವಂತಪ್ಪ ಸುತಾರ ಒಕ್ಕಲುತನದೊಂದಿಗೆ ಬಡಗಿ ವೃತ್ತಿಯನ್ನು ಪೋಷಿಸಿಕೊಂಡು ಬಂದವರು. ಅಲ್ಲಿ ಶಾಲೆಗೆ ಹೊರಟ ಬಾಲಕ ಬಾಲಕೃಷ್ಣ ಹೊಲಗದ್ದೆಯ ಕೆಲಸಕಾರ್ಯದೊಂದಿಗೆ ಬಡಗಿ ಕೆಲಸಗಳನ್ನು ಮಾಡತೊಡಗಿದರು.

ಸೋದರಮಾವನ ಮನೆಯಲ್ಲಿ ಎಲ್ಲ ವರ್ಗದ ಜನ ಬರುತ್ತಿದ್ದರು. ಅವರಲ್ಲಿ ಶಿಕ್ಷಕರೂ ಕೂಡ. ಸಂಬಂಧಪಟ್ಟ ಮಾಸ್ತರರಿಗೆ ಮಾವ ಕೇಳಿಯೇ ಬಿಟ್ಟಿದ್ದರು. "ನಮ್ಮ ಹುಡುಗನಿಗೆ ಚಿತ್ರ-ಗಿತ್ರ ತಗ್ಯಾಕ ಕೊಡಬ್ಯಾಡ್ರಿ"... ಅಂತ. ಚಿತ್ರಕಲೆಯನ್ನು ವಿರೋಧಿಸುವವರ ನಡುವೆ ಬಾಳುತ್ತಿದ್ದ ಬಾಲಕ

ಬಾಲಕೃಷ್ಣನ ಕಲೆಯ ಕುರಿತಾದ ಅದಮ್ಯ ಪ್ರೀತಿ, ದಾಹ ಎಳ್ಳಷ್ಟು ಕುಂದಲಿಲ್ಲ. ಯಳ್ಳೂರಿನ ಮರಾಠಿ ಗಂಡು ಮಕ್ಕಳ ಶಾಲೆಯೊಳಗೆ ಮುಲ್ಕಿ ತನಕ ಕಲಿತರು. ಮನೆ ಮಾತು ಕನ್ನಡವಾಗಿದ್ದರೂ ಶಹಾಪೂರ ಮತ್ತು ಯಳ್ಳೂರಗಳು ಸಾಂಗಲಿ ಮತ್ತು ಕುರುಂದವಾಡ ಸಂಸ್ಥಾನಿಕರ ಪ್ರದೇಶವಾಗಿದ್ದರಿಂದ ಬಿ.ಕೆ. ಮರಾಠಿಯಲ್ಲಿ ಕಲಿಯಬೇಕಾಯಿತು.

ಮುಲ್ಕಿ ಬಳಿಕ ತುಸು ದಿನ ವಿರಾಮ. ಆವಾಗ ವಾರಕ್ಕೊಮ್ಮೆ ಶಹಾಪೂರದ ಸ್ವಂತ ಮನೆಗೆ ಬಂದು ಹೋಗುತ್ತಿದ್ದರು. ಆಮೇಲೆ ತಂದೆಯವರು ಅವರನ್ನು ವಡಗಾವಿಯ ಮಿಡಲ್ ಸ್ಕೂಲಿಗೆ ಸೇರಿಸಿದರು. ದಿನಾಲು ಯಳ್ಳೂರಿನಿಂದ ವಡಗಾವಿಗೆ ನಾಲ್ಕು ಮೈಲು ದೂರ ನಡೆದುಕೊಂಡೇ ಹೋಗಬೇಕು. ಹೀಗೆ ಪ್ರಾಥಮಿಕ ಶಿಕ್ಷಣ ಪಡೆದರು.

## ಚಿತ್ರಕಲೆಗೆ ದೊರೆತ ಪ್ರೋತ್ಸಾಹ

ಮಿಡಲ್ ಸ್ಕೂಲಿನಲ್ಲಿ ಕಲೆ ಮತ್ತು ಅಭ್ಯಾಸ ಒಟ್ಟಿಗೆ ಸಾಗಿದವು. "ಇಲ್ಲಿ ನನ್ನ ಕಲೆಗೆ ಬಹಳ ಪ್ರೋತ್ಸಾಹ ಸಿಕ್ಕಿತು." ಎಂದು ನೆನಪಿಸಿಕೊಂಡು ಹೇಳುವ ಹುಬಳಿಯವರು ತಮಗೆ ತಿಂಡಿಗೆ ಕೊಟ್ಟ ದುಡ್ಡಿನಲ್ಲಿ ಕಾಗದ, ಪೆನ್ಸಿಲ್ ಇತ್ಯಾದಿ ಸಾಮಗ್ರಿ ಕೊಳ್ಳುತ್ತಿದ್ದರು. ಅವುಗಳನ್ನು ಬಳಸಿಕೊಂಡು ಚಿತ್ರ ಬರೆಯುವ ಹವ್ಯಾಸ ಬೆಳೆಸಿಕೊಂಡರು. ಸುಂದರವಾದ ರೇಖಾ ಚಿತ್ರಗಳು ಜೀವ ತಳೆದವು. 'ಫಿಗರೇಟಿವ್' ಫಾರ್ಮನಲ್ಲಿ ಅಧಿಕವಾಗಿ ಚಿತ್ರ ರಚನೆಯನ್ನು ಈ ಸಂದರ್ಭದಲ್ಲಿ ಅವರು ಮಾಡಿದರು.

ಮರಾಠಿಯಲ್ಲಿ ಜನಪ್ರಿಯತೆ ಗಳಿಸಿದ ಚಿತ್ರ 'ಸಂತ ತುಕಾರಾಮ' ಬೆಳಗಾವಿಯಲ್ಲಿ ಪ್ರದರ್ಶನ ಕಾಣುತ್ತಿತ್ತು. ಆ ಚಲನಚಿತ್ರ ನೋಡಿದ ಹುಬಳಿಯವರು ತುಂಬಾ ಪ್ರಭಾವಕ್ಕೊಳಗಾದರು. ತುಕಾರಾಮನ ಅನೇಕ ಚಿತ್ರಗಳನ್ನು ಬಿಡಿಸಿ ಜನರಿಗೆ ಹಂಚಿದರು. ಸ್ಕೂಲಿನಲ್ಲಿ ಪ್ರಕಟವಾಗುತ್ತಿದ್ದ ಮಾಸಪತ್ರಿಕೆಗೂ ಶಿಕ್ಷಕರಿಂದ ಚಿತ್ರ ಬರೆದು ಕೊಡಲು ಆಗ್ರಹ. ಹೀಗೆ ದೊರೆತ ಪ್ರೋತ್ಸಾಹಗಳನ್ನು ಬಳಸಿಕೊಂಡರು. ಆಸೆಗಳು ಇನ್ನಷ್ಟು ಗಟ್ಟಿಗೊಂಡವು. ಆಸೆ ಒತ್ತರಿಸಿದಂತೆ ಅವರ ಆಸಕ್ತ ಆಶಯ ಪೌರಾಣಿಕ ಕಥಾವಸ್ತುವಿನಲ್ಲಿ ಬಹಳಷ್ಟು ಕೃತಿಗಳು ಹೊರಬಂದವು. ಶಾಲಾ ದಿನಗಳಲ್ಲಿ ವಿರೋಧದ ನಡುವೆಯೂ ಸತತ ಪ್ರಯೋಗ ಗುಣಗಳನ್ನು ಕಾಪಾಡಿಕೊಂಡು ಬೆಳೆಸಿಕೊಳ್ಳುತ್ತ ಸಾಗಿದರು.

## ಪವಾರರಿಂದ ದೊರೆತ ಕಲಾ ಸಂಸ್ಕಾರ

ಬೆಳಗಾವಿಯ ಮರಾಠಾ ಮಂಡಳ ಹೈಸ್ಕೂಲು ಸೇರಿಕೊಂಡರು. ಇಲ್ಲಿ ಹುಬಳಿಯವರಿಗೆ ಕಲೆಯ ಪ್ರಾಥಮಿಕ ಶಿಕ್ಷಣ ಲಭಿಸಿತು. ಕಲಾಶಿಕ್ಷಕ ರಾಮಚಂದ್ರ ಭೈರು ಪವಾರರು ಅವರಿಗೆ ಕಲಾ ಬದುಕಿನ ಅಡಿಪಾಯ ಹಾಕಿಕೊಟ್ಟರು. ಬಾಲಕೃಷ್ಣನಲ್ಲಿ ಸುಪ್ತವಾಗಿದ್ದ ಕಲಾವಿದನನ್ನು ಎಚ್ಚರಿಸಿ ಆತನಿಗೆ ಮೂಲಭೂತ ಕಲಾಸಂಸ್ಕಾರ ನೀಡಿದರು. ಕ್ರಮೇಣ ಹುಬಳಿಯವರಿಗೆ ಚಿತ್ರಕಲೆಯ ಒಳ-ಹೊರನೋಟದ ಅರಿವು ಮೂಡತೊಡಗಿತು. ಕಲೆಯ ದೃಷ್ಟಿ ಸಿಕ್ಕಿತು.

ಮುಂಬೈನ ಜೆ.ಜೆ.ಕಲಾ ಶಾಲೆಯಲ್ಲಿ ಕಲಾವ್ಯಾಸಂಗ ಪಡೆದಿದ್ದ ಪವಾರರು ಪ್ರತಿಭಾವಂತ ಕಲಾವಿದರು ಮತ್ತು ಕಲಾ ಶಿಕ್ಷಕರು. ರೇಖಾಚಿತ್ರ, ಜಲವರ್ಣಗಳಲ್ಲಿ ಪ್ರಚಂಡ ಹಿಡಿತ ಸಾಧಿಸಿದವರು. ಬಿ.ಕೆ. ಹುಬಳಿ ತಮ್ಮ ಗುರುಗಳನ್ನು ಹೃದಯ ತುಂಬಿ ನೆನೆದು -- "ನಾನಿವತ್ತು ವಾಟರ್ ಕಲರ್ ದೊಳಗ ಇಷ್ಟೊಂದು ಹಿಡಿತ, ಯಶಸ್ಸು ಸಾಧಿಸಲಿಕ್ಕ ಪವಾರ ಗುರುಗಳ ಮಾರ್ಗದರ್ಶನವೇ ಕಾರಣ, ಇನ್ನೂ ತನಕ ಅಂಥ ಕಲಾವಿದರನ್ನು ನಾನು ಕಂಡೇ ಇಲ್ಲ ...." ಎಂದು ಕಲೆಯ ಗುಟ್ಟನ್ನು ತೆರೆದಿಡುತ್ತಾರೆ.

## ಜಲವರ್ಣದಲ್ಲಿ ಮೂಡಿದ ನಿಸರ್ಗ ಸೊಬಗು

ಸಂಜೆ ಸೂರ್ಯಾಸ್ತದ ಸೊಬಗು ಅನಿರ್ವಚನೀಯ. ಬಾನು ತುಂಬ ನೆತ್ತರು ಕಾರಿ ಅಸ್ತನಾಗುವ ಭಾನು ಹಿಂಜು ಹಿಂಜಾದ ಹರಕು ಮೋಡಗಳಿಗೆ ಹೊನ್ನಿನ ಹೊದಿಕೆ ಹಾಕಿ ಮುಳುಗುತ್ತಾನೆ. ಇದು ನಿಸರ್ಗದ ವರ್ಣಮಯ ಚಿತ್ತಾರ. ಈ ಬಗೆಯ ದೃಶ್ಯಗಳು ಹುಬಳಿಯವರಿಗೆ ಅತ್ಯಂತ ಪ್ರಿಯವಾದಂಥವು. ಈ ನೈಸರ್ಗಿಕ ಚೆಲುವನ್ನು ಅವರು ತಮ್ಮ ಕಲೆಗೆ ಆಯ್ದುಕೊಂಡರು. ಇಂಥ ಸುಂದರ ಮತ್ತು ಕಲಾತ್ಮಕ ಜಲವರ್ಣ ಕೃತಿ ನೋಡಿದ ಪವಾರರು ಶಿಷ್ಯನ ಪ್ರತಿಭೆಗೆ ಬೆರಗಾದರು. ಈತನನ್ನು ಡ್ರಾಯಿಂಗ್ ಪರೀಕ್ಷೆಗೆ ಕಳಿಸಲು ಯೋಚಿಸಿ ಆ ಪರೀಕ್ಷೆಗೆ ಕುಳಿತುಕೊಳ್ಳಲು ಸಲಹೆ ನೀಡಿದರು. ಅದು ಸಹ ಒಮ್ಮೆಲೆ ಎರಡನೆಯ ಹಂತದ ಇಂಟರ್ ಮಿಡಿಯಟ್ ಪರೀಕ್ಷೆ! ಹುಬಳಿ ಕೇಳಿ ಅವಕ್ಕಾದರು. ಆದರೆ ಪವಾರರಿಗೆ ಬಿ.ಕೆ.ಯವರ ಮೇಲೆ ಭರವಸೆಯಿತ್ತು. ಪರೀಕ್ಷೆಗೆ ಒತ್ತಾಯಿಸಿದರು.

ಮನೆಯಲ್ಲಿ ಚಿತ್ರಕಲೆಗೆ ಪ್ರೋತ್ಸಾಹವಿಲ್ಲ. ಆಗ ಹಣದ

ಅಡಚಣೆಯಿತ್ತು. ಮನೆಯಲ್ಲಿ ಹಣ ಕೇಳಲಿಲ್ಲ. ಪರೀಕ್ಷೆಯ ಶುಲ್ಕ ನಾಲ್ಕು ರೂಪಾಯಿ. ಈ ಚಿಂತೆಯಲ್ಲಿ ಕೊನೆಯ ದಿನಾಂಕ ಮುಗಿದುದು ಹುಬಳಿಯವರಿಗೆ ಗೊತ್ತಿರಲಿಲ್ಲ. ಸ್ಕೂಲಿಗೆ ಹೋದಾಗ ಸಹಪಾಠಿಗಳು "ಕೊನೆ ದಿನಾಂಕ ಮುಗೀತು. ಯಾಕ ನೀನು ಕಟ್ಟಲಿಲ್ಲ?" ಅಂತ ಕೇಳಿದರು. ಬಿ.ಕೆ. ಅವರ ಮೌನವೇ ಸಹಪಾಠಿಗಳಿಗೆ ಉತ್ತರವಾಗಿತ್ತು.

ಒದಗಿ ಬಂದ ಅವಕಾಶ ಕೈ ಜಾರಿತೆಂದು ಮನದೊಳಗೆ ಕಸಿವಿಸಿ. ಪವಾರರ ಬಳಿ ಸಾವಕಾಶ ಹೆಜ್ಜೆಯಿಡುತ್ತ ಹೋದರು. ಅಳುಕಿನಿಂದ ಕೇಳಿದರು. "ಸರ್ ಫಾರ್ಮ ತುಂಬೋದು ಮುಗಿದು ಹೋಯಿತೇನ್ರಿ"....? ಪವಾರರು– "ಆಯಿತಲ್ಲ... ಅದರೆ ನಿನ್ನ ಫಾರ್ಮನ್ನ ತುಂಬಿ ಕಳಸೇನಿ"-.. ಅಂದರು. ಪವಾರ ಗುರುಗಳ ಪ್ರೀತಿ ವಿಶ್ವಾಸಕ್ಕೆ ಹುಬಳಿಯವರ ಕಣ್ಣಾಲಿಗಳು ಹಸಿಯಾದವು. ಕೃತಜ್ಞತಾ ಭಾವ ಕಣ್ಣಲ್ಲಿ ಮಿಂಚುತ್ತಿತ್ತು.

"ಅವರು ಖರೇವಂದ್ರು ನನ್ನ ವ್ಯಾಲ ಭಾಳ ಪ್ರೀತಿ ತೋರಿಸಿದವರು...."ಎಂಬ ಹೃದಯ ತುಂಬಿದ ಉದ್ಗಾರ ಈಗಲೂ ಹುಬಳಿಯವರ ಬಾಯಿಂದ ಉದುರುತ್ತದೆ. "ನನ್ನ ಪ್ರತಿಭೆಯ ಅರಿವಿದ್ದ ಪವಾರರು ಕಾಗದ, ಪೆನ್ಸಿಲ್, ಕಲರ್, ಕುಂಚ ಹೀಗೆ ಎಲ್ಲಾನೂ ಕೊಡುತ್ತಿದ್ದರು. ಸ್ಕೂಲು ಬಿಟ್ಟನಂತರ ಅವರ ಮಹಡಿಯ ಹೊರ ಗ್ಯಾಲರಿಯೊಳಗೆ ಕೂತು ಸಂಜೆಯ ವರ್ಣಮಯ ಸೊಬಗನ್ನು ಬರೀತಿದ್ದೆ. ತೋರಿಸಿದಾಗ ಮೆಚ್ಚುತ್ತಿದ್ದರು. ಮಾರ್ಗದರ್ಶನ ನೀಡುತ್ತಿದ್ದರು." ತಮ್ಮ ಪ್ರತಿಭೆಗೆ ಕಲಾ ಸಂಸ್ಕಾರ ದೊರೆತ ಆರಂಭದ ದಿನಗಳನ್ನು ಹೀಗೆ ಮೆಲುಕುವರು.

**ಪರೀಕ್ಷೆಯ ಸಿದ್ಧತೆ**

ಪವಾರರ ಪಾಠ ಪ್ರವಚನ, ಅವರು ಹೇಳಿಕೊಟ್ಟ ರೇಖೆ ಮತ್ತು ವರ್ಣ ಪ್ರಯೋಗ ಇವತ್ತಿಗೂ ಅಚ್ಚೊತ್ತಿದಂತೆ. ಅವರ ಕಲಾಜ್ಞಾನದ ಅರಿವನ್ನು ಪಡಕೊಂಡವರು ಹುಬಳಿಯವರು. ಪರೀಕ್ಷೆಯ ತಯಾರಿ ಶುರುವಾಯಿತು. ಗುರುಗಳು ಹೇಳಿದುದನ್ನು ಏಕಚಿತ್ತದಿಂದ ಕೇಳಿ ಅರಿತು ಚಿತ್ರ ಸೃಜನೆಗೆ ತೊಡುಗುತ್ತಿದ್ದರು. ಅದು ನಿಸರ್ಗಚಿತ್ರವಿರಲಿ, ವಾಸ್ತವ ನೆಲೆಯಲ್ಲಿರಲಿ, ರೇಖೆ ಮತ್ತು ವರ್ಣ ಸಂಯೋಜನೆಯಲ್ಲಿ ಕ್ರಮೇಣ ಹಿಡಿತ ಸಿಕ್ಕಿ ಚಿತ್ರಗಳು ಬಹು ಚೆಂದವಾಗಿ ಅರಳತೊಡಗಿದವು. ವಿದ್ಯಾರ್ಥಿಯೊಬ್ಬ ಬರೆದ ಚಿತ್ರವೆ? ಎಂದು ಹುಬ್ಬೇರಿಸುವಂತೆ ಆಯಿತು.

ಸ್ಕೂಲಿನಲ್ಲಿ ಒಮ್ಮೆ ವಿದ್ಯಾರ್ಥಿಗಳ ಆಯ್ದ ಕೃತಿಗಳ ಪ್ರದರ್ಶನ ನಡೆಯಿತು. ಆಗ ಸ್ಕೂಲು ಇನ್ಸಪೆಕ್ಟರರಾಗಿ ಡಿ.ಜಿ. ಬಡಿಗೇರ ಅವರು ಆಗಮಿಸಿದ್ದರು. ಹುಬಳಿಯವರ ಕೃತಿಯೆದುರು ತಟ್ಟನೆ ನಿಂತರು. "ಯಾರು ಬಿಡಿಸಿದ ಕೃತಿಯಿದು!" ಅಂದರು. "ವಿದ್ಯಾರ್ಥಿಯೊಬ್ಬನ ಚಿತ್ರವದು" ಎಂದು ಹೇಳಿದರೆ ಅವರಿಗೆ ನಂಬಿಕೆಯಾಗಲಿಲ್ಲ. "ಸಾಧ್ಯವೇ ಇಲ್ಲ..." ಎಂದು ಬಡಿಗೇರರು ಉತ್ತರಿಸಿದರು. ಆದರೆ ಪವಾರರು "ಇಲ್ಲ, ವಿದ್ಯಾರ್ಥಿಯೊಬ್ಬನ ಚಿತ್ರವೇ ಇದಾಗಿದೆ." ಎಂದು ಹೇಳಿ ಬಿ.ಕೆ.ಯವರನ್ನು ಕರೆಯಿಸಿ ಪರಿಚಯಿಸಿದರು. ಸ್ಕೂಲ ಇನ್ಸಪೆಕ್ಟರ್ ಡಿ.ಜಿ. ಬಡಿಗೇರ ಅವರು ಬಿ.ಕೆ.ಯವರ ಪ್ರತಿಭೆಯನ್ನು ಮೆಚ್ಚಿ ಬೆನ್ನುತಟ್ಟಿದರು. ಹುರಿದುಂಬಿಸಿ ಪ್ರೋತ್ಸಾಹದ ಮಾತು ಹೇಳಿದರು. ಹಲವು ದಿನಗಳವರೆಗೆ ಬಿ.ಕೆ.ಯವರು ಬೆಳಗಾವಿಯ ಖಡೇಬಜಾರದಲ್ಲಿರುವ ಸ್ಕೂಲಿಗೆ ದಿನನಿತ್ಯ ಹೋಗಿ ಕಲಾಜ್ಞಾನ ಪಡೆದುಕೊಂಡರು.

ಹಸಿವು ಬಾಯಾರಿಕೆಯೆನ್ನದೆ ಪರೀಕ್ಷೆಯ ತಯಾರಿ ನಡೆಸಿದರು. ನಂಬಿಕೆ ಮತ್ತು ಶ್ರದ್ಧೆಯಿಂದ ಯಾವುದೇ ಕೆಲಸ ಕಾರ್ಯ ನಡೆಸಿದರೆ ಯಶಸ್ಸು ಬೆನ್ನ ಹಿಂದೆಯೇ ಬರುತ್ತದೆ ಎಂಬ ಮಾತನ್ನು ಬಿ.ಕೆ.ನಂಬಿದವರು. ಪರೀಕ್ಷೆಗೆ ಕುಳಿತರು. ಪವಾರರು ತಮ್ಮ ಸ್ವಂತ ಸಲಕರಣೆಗಳನ್ನು ನೀಡಿದರು. ಒಂದು ಕಿವಿಮಾತು ಹೇಳಿದರು. "ಪರೀಕ್ಷೆಯಲ್ಲಿ ಕೊಟ್ಟ ವಿಷಯವನ್ನು ಮಾಡಿ ಮುಗಿಸಿದ ಬಳಿಕ ಕೂಡಲೇ ಹೊರಗೆ ಬಂದುಬಿಡು"... ಎಂದು. ಹುಬಳಿಯವರಿಗೆ ಇದು ಅರ್ಥವಾಗಲಿಲ್ಲ. ಹೇಳಿದಷ್ಟೆ ಮಾಡಿದರು. ಆಮೇಲೆ ಯಾಕೆ ಹಾಗೆ ಹೇಳಿದರು ಎಂಬುದರ ಅರಿವಾಯಿತು. ಈ ಮಾತಿನ ಹಿಂದಿರುವ ಉದ್ದೇಶವಿಷ್ಟೆ. ಅಲ್ಲಿಯೇ ಕುಳಿತರೆ ಚಿತ್ರವನ್ನು ವಿದ್ಯಾರ್ಥಿ ಕೆಡಿಸಿಬಿಡುವ ಹೆದರಿಕೆ ಇರುತ್ತದೆ. ಉಳಿದಿರುವ ಸಮಯದಲ್ಲಿ ಚಿತ್ರಬಿಡಿಸಲು ಹೋಗಿ ಕೆಡಬಹುದಲ್ಲ ಎಂಬ ದೂರದೃಷ್ಟಿ. ಇದು ಪವಾರರು ತೆಗೆದುಕೊಳ್ಳುವ ಕಾಳಜಿಯ ದ್ಯೋತಕ. ಬಿ.ಕೆ.ಹುಬಳಿಯವರು ಮೂರು ಗಂಟೆಗಳ ಪರೀಕ್ಷೆ ಅವಧಿಯಲ್ಲಿ ಅರ್ಧ ಗಂಟೆಯೊಳಗೆ ಚಿತ್ರ ರಚಿಸಿ ಹೊರಬಂದರು.

## ಮಹಾರಾಷ್ಟ್ರದ ಕಿರ್ಲೋಸ್ಕರವಾಡಿಗೆ

ಅಂದು ಈ ಪ್ರದೇಶ ಮುಂಬೈ ಪ್ರಾಂತ್ಯಕ್ಕೆ ಸೇರಿತ್ತು. ೧೯೪೨ರ ಅಸಹಕಾರ ಚಳುವಳಿ ಬಿರುಸಿನಿಂದ ಸಾಗಿತ್ತು. ಬೆಳಗಾವಿಯಲ್ಲೂ ಅದಕ್ಕೆ

ತುಂಬಾ ತೀವ್ರವಾದ ಕಾವು ಬಂದಿತ್ತು. ವ್ಯಾಪಾರ ವ್ಯವಹಾರಗಳ ಮೇಲೆ ಅದರ ಪರಿಣಾಮ. ಶಾಲಾ, ಕಾಲೇಜುಗಳು ಮುಚ್ಚಿದ್ದವು. ಒಂದು ವರ್ಷ ಪುಕ್ಕಟ್ಟೆ ಕಳೆಯಿತು. ಅವರ ಆರೋಗ್ಯವು ಸಹ ಹದಗೆಟ್ಟಿತ್ತು. ತಂದೆ ಕರವೀರಪ್ಪನವರು ಹುಡುಗನ ಆರೋಗ್ಯ ಸುಧಾರಣೆಯಾಗಬೇಕಾದರೆ ಸ್ಥಳ ಬದಲಾವಣೆ ಅಗತ್ಯವೆಂದು ಯೋಚಿಸಿದರು. ಬಿ.ಕೆ.ಹುಬಳಿಯವರನ್ನು ಚಿಗವ್ವ (ತಾಯಿಯ ತಂಗಿ)ಳ ಹತ್ತಿರ ಸಾತಾರಾ ಜಿಲ್ಲೆಯ ಕಿರ್ಲೊಸ್ಕರವಾಡಿ (ಸದ್ಯದ ಸಾಂಗಲಿ ಜಿಲ್ಲೆ)ಗೆ ಕಳಿಸಿದರು. ಅಲ್ಲಿ ಹುಬಳಿಯವರು ಮರಾಠಿ ಮಾಧ್ಯಮದಲ್ಲಿ ಮ್ಯಾಟ್ರಿಕ್ ಓದಿದರು. ೧೯೪೭ರಲ್ಲಿ ಮ್ಯಾಟ್ರಿಕ್ ಮುಗಿಸಿದ ಮೇಲೆ ತವರು ನೆಲ ಬೆಳಗಾವಿಗೆ ವಾಪಸಾದರು. ಎರಡ್ಮೂರು ವರ್ಷ ಖಡೇಬಜಾರನಲ್ಲಿದ್ದ ಫೋಟೊ ಸ್ಟುಡಿಯೋ ಒಂದರಲ್ಲಿ ಛಾಯಾಚಿತ್ರ ಕೆಲಸ ಅರಿತುಕೊಂಡರು.

## ಎಲಿಮೆಂಟರಿ ಪರೀಕ್ಷೆ

ಎಲಿಮೆಂಟರಿ ಪರೀಕ್ಷೆಗೆ ಕುಳಿತಾಗ ಹುಬಳಿಯವರು ಪ್ರಥಮ ಬಾರಿಗೆ ತೈಲವರ್ಣದಲ್ಲಿ ಚಿತ್ರ ರಚಿಸಿದರು. ಇದು ಹೊಸ ಅನುಭವ ಕೊಟ್ಟಿತು. ಪರೀಕ್ಷೆಗೆ ಆಯ್ದ ವಿಷಯ ಪೊರ್ಟ್ರೇಟ. ಪ್ರಸಿದ್ಧ ಕಲಾವಿದ ಹಳದಣಕರರು ಪರೀಕ್ಷಕರು. ಹುಬಳಿಯವರ ಕಲೆಯನ್ನು ಬಹಳಷ್ಟು ಮೆಚ್ಚಿಕೊಂಡರು. "ಯಾರಪ್ಪ ನೀನು? ಭಾಳ ಛಂದ ವರ್ಕ ಮಾಡಿದಿ. ಯಾರು ನಿನ್ನ ಗುರುಗಳು?" ಎಂದು ಬೆನ್ನು ತಟ್ಟಿದಾಗ ಬಿ.ಕೆ.ಯವರಿಗೆ ಸಂತಸ ಮತ್ತು ರೋಮಾಂಚನ. ಹಳದಣಕರರು ವರ್ಣಪ್ರಯೋಗ, ಮಿಶ್ರಣ ಮುಂತಾದ ಕಲೆಗೆ ಸಂಬಂಧಿಸಿದ ಸಾಕಷ್ಟು ವಿಚಾರಗಳನ್ನು ಅರುಹಿದರು. "ಅವರ ಮಾರ್ಗದರ್ಶನ ಇವತ್ತು ನನಗೆ ಕಲೆಯ ಹಾದಿಯ ಬೆಳಕು..." ಎಂದು ಹಳದಣಕರರನ್ನು ಮನಸಾರೆ ಸ್ಮರಿಸುತ್ತಾರೆ.

೧೯೫೫ರಲ್ಲಿ ಅಜಗಾಂವಕರ, ಕೆ.ಬಿ.ಕುಲಕರ್ಣಿ, ಪವಾರರು ಒಂದೆಡೆ ಸೇರಿ ಕಲೆಯ ಚಿಂತನೆಗಾಗಿ 'ಕಲಾನಿಕೇತನ' ಎಂಬ ವೇದಿಕೆಯನ್ನು ಹುಟ್ಟುಹಾಕಿದರು. ಈ ವೇದಿಕೆಯನ್ನು ಕಲೆಯ ವ್ಯಾಸಂಗ ಹಾಗೂ ಅದನ್ನು ಜನರ ತನಕ ಹೇಗೆ ಕೊಂಡೊಯ್ಯಬೇಕು ಎಂಬ ಅಲೋಚನೆಗಳಿಗಾಗಿ ಉಪಯೋಗಿಸಿದರು. ಈ ಮೂವರು ಬಹಳ ದಿನಗಳ ವರೆಗೆ ಇದನ್ನು ನಡೆಸಿಕೊಂಡು ಬಂದರು.

ಅಂದಿನ ದಿನಗಳಲ್ಲಿ. ಪರೀಕ್ಷೆಗೆ ಮುಂಚೆ ಸ್ಪೆಸಿಮನ್ ತಯಾರಿಸಿ ಕಳಿಸಬೇಕಾಗುತ್ತಿತ್ತು. ಅದು ಆಯ್ಕೆಗೊಂಡನಂತರ ಪರೀಕ್ಷೆಗೆ ಪ್ರವೇಶಾವಕಾಶ. ಕಲಾನಿಕೇತನದಡಿಯಲ್ಲಿ ಇಂಥ ಅನುಕೂಲತೆಗಳನ್ನು ಬಿ.ಕೆ.ಯವರೂ ಪಡೆದುಕೊಂಡರು.

## ಕಾಡಿದ ಸೋದರಿ ವಿಯೋಗ

ಬಿ.ಕೆ.ಹುಬಳಿಯವರು ತಮ್ಮ ತಂಗಿ ಗಂಗೂತಾಯಿಯವರನ್ನು ತುಂಬಾ ಪ್ರೀತಿಸುತ್ತಿದ್ದರು. ಗಂಗೂತಾಯಿಯವರಿಗೂ ಅಣ್ಣನ ಮೇಲೆ ಅಪಾರ ಮಮತೆ. ಅಣ್ಣನ ಬೆಳವಣಿಗೆಗಾಗಿ ಹಾತೊರೆವ ಜೀವ. ಅಣ್ಣ ದೊಡ್ಡ ಕಲಾವಿದರಾಗಿ ಬೆಳೆಯಬೇಕೆಂದು ಕನಸು ಕಾಣುತ್ತಿದ್ದರು. ಸೋದರಿ ಗಂಗೂತಾಯಿ ಲಗ್ನವಾಗಿ ತುಂಬು ಜೀವನ ನಡೆಸುತ್ತಿರುವಾಗ ಆಘಾತ ಸಿಡಿಲೆರಗಿದಂತೆ ಎರಗಿತ್ತು. ಅವರು ಅಕಾಲಿಕವಾಗಿ ಮರಣ ಹೊಂದಿದರು. ಬಿ.ಕೆ.ಅವರಿಗೆ ದುಃಖದ ಸಾಗರವೇ ಮೈಮೇಲೆ ಹರಿದಂತಾಯಿತು. ಕುಸಿದು ಹೋದರು. ಪ್ರಾಣದಂತೆ ಪ್ರಿಯವಾದ ಜೀವ ಇನ್ನಿಲ್ಲವಾದಾಗ ಪ್ರಾಣ ಕಳೆದುಕೊಂಡಂತಾಗಿ ಬಹು ದಿನಗಳ ತನಕ ವಿಯೋಗ ಕಾಡಿತು. "ಇನ್ನೂ ಕೂಡ ತಂಗಿ ನೆನಪು ಕಾಡತದ"... ಎಂದು ವಿಷಾದದಿಂದ ಹೇಳುವ ಹುಬಳಿಯವರ ಮುಪ್ಪಾದ ಕಣ್ಣುಗಳು ಹಸಿಯಾಗುತ್ತವೆ. ತಂಗಿಯನ್ನು ಮದುವೆಯಾದಂತಹ ವಿ.ಸಿ.ವೆಂಕಟರಾಮಯ್ಯ ಅವರು ಮರುಮದುವೆಯಾಗಲಿಲ್ಲ. ಅವರು ಶಿಕ್ಷಣ ಇಲಾಖೆಯಲ್ಲಿ ಉನ್ನತ ಹುದ್ದೆಯಲ್ಲಿದ್ದರು.

## ಹಾಲಭಾವಿಯವರ ಸ್ಕೂಲಿಂದ ಜೆ.ಜೆ. ವರೆಗೆ

ಧಾರವಾಡದ ಹಾಲಭಾವಿಯವರ ಕಲಾಶಾಲೆ ಉತ್ತರ ಕರ್ನಾಟಕದಲ್ಲಿ ಹೆಸರು ಪಡೆದ ಸ್ಕೂಲು. ನಾಡಿನ ಖ್ಯಾತ ಕಲಾವಿದ ಹಾಲಭಾವಿಯವರೂ ಸಹ ಅನೇಕ ಶಿಷ್ಯ ಸಮೂಹವನ್ನು ನಾಡಿಗೆ ಕೊಟ್ಟಿದ್ದಾರೆ. ಅಂಥ ಶಾಲೆಯಲ್ಲಿ ಡಿ.ಟಿ.ಸಿ. ಮಾಡಲು ಬಿ.ಕೆ. ಪ್ರವೇಶ ಪಡೆದರು. ನಿರಂತರ ಕಲಾಚಿಂತನೆ ಪ್ರಯೋಗಶೀಲತೆಯನ್ನು ಮೈಗೂಡಿಸಿಕೊಂಡು ಬಂದಿದ್ದ ಬಿ.ಕೆ. ಅವರಿಗೆ ಡಿ.ಟಿ.ಸಿ ಸುಲಭದ ತುತ್ತು. ಜತೆಗೆ ಕಲಾಚೇತನ ಡಿ.ವಿ. ಹಾಲಭಾವಿಯವರ ಮಾರ್ಗದರ್ಶನ. ೧೯೫೪ರಲ್ಲಿ ಡಿ.ಟಿ.ಸಿ.ಯಲ್ಲಿ ಮೊದಲವರ್ಗದಲ್ಲಿ ತೇರ್ಗಡೆಯಾದರು. ಅಂದಿನ ದಿನಗಳಲ್ಲಿ ಮುಂಬೈನಲ್ಲಿ ಪರೀಕ್ಷೆಗಳು

ನಡೆಯುತ್ತಿದ್ದವು. ಜೆ.ಜೆ. ಕಲಾ ಶಾಲೆಯಲ್ಲಿ ಹುಬಳಿ ಪರೀಕ್ಷೆಗೆ ಹೋದಾಗ ಜೆ.ಜೆ.ನಲ್ಲಿ ಪದವಿ ಪಡೆವ ಹಂಬಲ ಬಲಮುರಿಗೊಂಡು ಬಂದಿತು. ಅದಕ್ಕೆ ಸಿದ್ಧತೆ ನಡೆಸಹತ್ತಿದರು.

ಧಾರವಾಡದ ಕಲಾಶಾಲೆಯಲ್ಲಿರುವಾಗ ಬಿ.ಕೆ. ಹುಬಳಿ ಮತ್ತು ಅಪ್ಪಾಜಿ ಸೀಮು ಡಿಪ್ಲೋಮಾ ಪದವಿಗಾಗಿ 'ಸ್ಪೆಸಿಮನ್' ತಯಾರಿಸಿ ಮುಂಬೈನ ಜೆ.ಜೆ.ಸ್ಕೂಲ್ ಆಫ್ ಫೈನ್ ಆರ್ಟ್ಸ್‌ಗೆ ಕಳಿಸಿದರು. ಅವು ಅಲ್ಲಿ ಆಯ್ಕೆಯಾದವು. ಹೀಗಾಗಿ ಅವರಿಗೆ ಜೆ.ಜೆ.ನಲ್ಲಿ ಜಿ.ಡಿ. ಆರ್ಟ ಪರೀಕ್ಷೆಗಾಗಿ ಪ್ರವೇಶ ಲಭಿಸಿತು. ೧೯೫೩ರಲ್ಲಿ ಜಿ.ಡಿ.ಆರ್ಟ ಪದವಿಗಳಿಸಿದರು.

## ಮುಂಬೈನಲ್ಲಿ

ಎರಡು ವರ್ಷ ಬಿ.ಕೆ. ಮುಂಬೈನಲ್ಲಿ ಕಳೆದರು. ಗ್ರಾಂಟ್ ರಸ್ತೆಯಲ್ಲಿದ್ದ ಕಬ್ಬೆ ಸ್ಟುಡಿಯೋದಲ್ಲಿ ಕೆಲಸಕ್ಕಿದ್ದರು. ಅಲ್ಲಿ ಸಿನಿಮಾ ಶೋ ಕಾರ್ಡ್ಸ ಬಿಡಿಸುತ್ತಿದ್ದರು. ತ್ರಿನ್‌ದಾದ, ಎಸ್.ಎಂ.ಪಂಡಿತ, ದಂಡಾವತಿಮಠರಂಥ ಖ್ಯಾತನಾಮರ ಕೃತಿಗಳನ್ನು ನೋಡುವುದಕ್ಕಾಗಿ ಅವರ ಸ್ಟುಡಿಯೋ ಹಾಗೂ ಮನೆಗಳಿಗೂ ಬಿ.ಕೆ. ಹೋಗುತ್ತಿದ್ದರು. ಇಂಗ್ಲೀಷ್ ಶೈಲಿಯ ಚಿತ್ರಗಳು ಹೆಚ್ಚಿಗೆ ಮೆಚ್ಚುಗೆಯಾಗುತ್ತಿದ್ದವು. ಆಗಾಗ ಜೆ.ಜೆ. ಕಡೆಗೆ ಹೆಜ್ಜೆ ಹಾಕಿದಾಗ ಅಲ್ಲಿ ಕಲಾಋಷಿಗಳ ಸಂಗ ಸಿಗುತ್ತಿತ್ತು. ಅಂಥವರಲ್ಲಿ ಅಮೇರಿಕಾದ ಕಲಾವಿದ ಲ್ಯಾಂಗ್ ಹ್ಯಾಮರ್ ಕೂಡ ಒಬ್ಬರು. 'ವೀಕ್ಲಿ' ಪತ್ರಿಕೆ ಬಳಗದಲ್ಲಿ ಕೆಲಸಕ್ಕಿದ್ದ ಲ್ಯಾಂಗ್ ಹ್ಯಾಮರ್ ಪ್ರಾತ್ಯಕ್ಷಿಕೆ ನೀಡುತ್ತಿದ್ದರು. ಅವರ ಕೈಚಳಕ, ವರ್ಣ ಸಂಯೋಜನೆ, ಪ್ರಯೋಗ ಗುಣಗಳು ಬಿ.ಕೆ.ಯವರನ್ನು ಕಾಡುತ್ತಿದ್ದವು.

ಕಬ್ಬೆ ಸ್ಟುಡಿಯೋದಲ್ಲಿ ಬಿ.ಕೆ. ಹುಬಳಿ, ಗೋಂದಕರ, ಹೂಗಾರ ಹೀಗೆ ಈ ಮೂವರು ಕೂಡಿಯೇ ಇರುತ್ತಿದ್ದರು. ಗೋಂದಕರ ಮತ್ತು ಹೂಗಾರರು ಕರ್ನಾಟಕದವರು. ಸಿನೇಮಾ ಬ್ಯಾನರ್ ಮತ್ತು ಶೋಕಾರ್ಡ್ಸನಲ್ಲಿ ನಿಷ್ಣಾತರು. ಎಸ್.ಎಂ. ಪಂಡಿತರೂ ಸಹ ಸಿನೇಮಾ ಶೋಕಾರ್ಡ್ಸ ನಿರ್ಮಿಸುತ್ತಿದ್ದರು. ಇವೆರಲ್ಲರ ಜತೆಗೆ ಕಳೆದ ದಟ್ಟ ಅನುಭವ ಬಿ.ಕೆ.ಅವರ ಪ್ರತಿಭೆಯನ್ನು ಸಾಕಷ್ಟು ಗಟ್ಟಿಗೊಳಿಸಿತು. ಜಲವರ್ಣ ಶೈಲಿಗೆ ಮನಸೋತರು. ಅತ್ತ ಒಲವು ಹೆಚ್ಚಾಗಿ ಹರಿಯಿತು. ಜಲವರ್ಣದಲ್ಲಿ ಕೃತಿ ರಚನೆಗೈಯ್ಯುತ್ತ ಹಿಡಿತವನ್ನು ಸಾಧಿಸಿದರು.

## ಶುಭಲಗ್ನ ಕೂಡಿ ಬಂತು

ಎರಡು ವಸಂತಗಳ ಮುಂಬೈ ಗಾಳಿ, ನೀರು ಕುಡಿದು ಬಂದ ಬಿ.ಕೆ. ಅವರಿಗೆ ಬೇಗ ಉದ್ಯೋಗ ಸಿಗಲಿಲ್ಲ. ಮನೆತನ ಹೊಣೆಗಾರಿಕೆಯೇನೂ ಇವರ ಹೆಗಲ ಮೇಲಿರಲಿಲ್ಲ. ತಂದೆಯವರು ತಮ್ಮ ವೃತ್ತಿಯಿಂದ ತೃಪ್ತಿಕರ ಬದುಕನ್ನು ಸಂತೋಷದಿಂದ ಸಾಗಿಸಿದ್ದರು. ಅವರಿಗೆ ವಯಸ್ಸಾದ ಹಿರಿಯ ಮಗನಿಗೆ ಮದುವೆ ಮಾಡುವ ಆಸೆ. ಬಿ.ಕೆ.ಹುಬಳಿಯವರಿಗೆ ಕಿತ್ತೂರಿನ ಕನ್ಯೆ ಗೊತ್ತಾದರು.

ಕಿತ್ತೂರು ಐತಿಹಾಸಿಕ ಪ್ರಸಿದ್ಧಿಯ ಗ್ರಾಮ. ಭಾರತದ ಮೊಟ್ಟಮೊದಲ ಮಹಿಳಾ ಹೋರಾಟಗಾರ್ತಿ ವೀರವನಿತೆ ಕಿತ್ತೂರು ಚೆನ್ನಮ್ಮ. ಬೈಲಹೊಂಗಲ ತಾಲ್ಲೂಕಿನ ಗಂಡು ಮೆಟ್ಟಿನ ನಾಡಾದ ಕಿತ್ತೂರಿನ ಮಾನಪ್ಪ ಪತ್ತಾರರ ಮಗಳಾದ ಗಿರಿಜಾ, ಬಿ.ಕೆ. ಅವರ ಭಾವೀ ಮಡದಿ. ಮುಲ್ಕಿ ತನಕ ವಿದ್ಯಾಭ್ಯಾಸ. ವಿಶ್ವಕರ್ಮ ಮನೆತನ. ಈ ಮನೆತನದವರಿಗೆ ಕಲೆಯನ್ನು ಹೇಳಿಕೊಡಬೇಕಿಲ್ಲ. ಅದು ಅವರಿಗೆ ರಕ್ತಗತವಾದುದು. ಮಾನಪ್ಪ ಪತ್ತಾರರೂ ಕೂಡ ಪ್ರಸಿದ್ಧ ಮೂರ್ತಿಕಾರರು. ಅವರ ಮಗಳಾದ ಗಿರಿಜಾ ಅವರೂ ಮೂರ್ತಿ ತಯಾರಿಸುವಲ್ಲಿ ಪರಿಣಿತರು. ಇವರೊಂದಿಗೆ ೧೯೬೦ರಲ್ಲಿ ಬಿ.ಕೆ. ಲಗ್ನವಾದರು. ಬಿ.ಕೆ.ಯವರ ಕಲಾ ಬದುಕಿನ ದಾರಿಗೆ ಗಿರಿಜಾ ದೀಪವಾಗಿ ಬಂದರು. ಕಲಾವಲಯವನ್ನು ಬೆಳಗಿದರು. ಅವರಿಗೆ ಸ್ಫೂರ್ತಿಯ ಸೆಲೆಯಾದರು.

ಬಿ.ಕೆ. ಹುಬಳಿಯವರ ಸೋದರರು, ಮನೆತನದ ಅಕ್ಕಸಾಲಿಗ ವೃತ್ತಿ ಮುಂದುವರೆಸಿ ಉಪಜೀವನ ನಡೆಸಿದರೆ, ಬಿ.ಕೆ.ಕಲೆಯನ್ನು ಜತನವಾಗಿಸಿಕೊಂಡರು. ಒಬ್ಬ ತಮ್ಮ ಪುಣೆಯ ಪೋಲಿಸ್ ಇಲಾಖೆಯಲ್ಲಿ ಕೆಲಸದಲ್ಲಿದರೆ ಇನ್ನೊಬ್ಬರು ಮನೆತನ ವೃತ್ತಿಯನ್ನು ನಡೆಸಿಕೊಂಡಿದ್ದಾರೆ. ಇಂಥ ತುಂಬು ಬಳಗದ ಬಿ.ಕೆ. ಅವರಿಗೆ ಕಲೆಯ ದೃಷ್ಟಿಯನ್ನು ತೀಕ್ಷ್ಣವಾಗಿಸಲು, ಅದರಲ್ಲಿ ಗಟ್ಟಿಯಾಗಿ ಮುಂದೆ ಸಾಗಲು ಪ್ರೇರಣೆ ಸಿಕ್ಕಿತು.

## ಇಂಗ್ಲೀಷ್ ಕಲಾವಿದರ ಪ್ರಭಾವ

ಬಿ.ಕೆ. ಹುಬಳಿಯವರ ಜಲವರ್ಣದ ಸಾಧನೆಗೆ ಇಂಗ್ಲೀಷ ಕಲಾವಿದರ ಪ್ರಭಾವ ಕಾರಣವಿದ್ದಿರಬಹುದು. ಅವರ ಜಲವರ್ಣಗಳು ಕಲಾತ್ಮಕ ಹಾಗೂ ಜೀವತ್ವ ಪಡೆದ ಕೃತಿಗಳು, ಕೃತಿಯಿಂದ ಕೃತಿಗೆ ಪಡೆದ ಸಾಧನೆ ಗಮನಿಸಿದಾಗ

ಬಿ.ಕೆ. ಅವರ ಪ್ರತಿಭೆಯ ಆಳ, ಹರಿವಿನ ಅರಿವು ಮೂಡುತ್ತದೆ. ಅವರಿಗೆ ಇಂಗ್ಲೀಷ ಚಿತ್ರಕಲಾವಿದರ ಹಾಗೆ ತಾನೂ ಕೃತಿ ರಚಿಸಬೇಕೆಂಬ ಅದಮ್ಯ ಹಂಬಲವಿತ್ತು. ಹೀಗಾಗಿ ಅವರ ಕೃತಿಗಳ ಅಧ್ಯಯನ ನಡೆಸಿದರು.

ಲಿಯೋನಾರ್ಡೊ ಡವಿಂಚಿ, ಮೈಕಲ್ ಎಂಜಿಲೋ, ರೆಂಬ್ರಾ ರಂತಹ ಕಲಾವಿದರ ಚರಿತ್ರೆ ಓದಿಕೊಂಡರು. ಅವರ ಕಲೆಯ ತಂತ್ರ, ಶೈಲಿ, ವರ್ಣಪ್ರಯೋಗ, ವಸ್ತು ಬಳಕೆ ಮುಂತಾದ ವಿಚಾರಗಳನ್ನು ಬಿ.ಕೆ. ಅರಿತರು. ರಸಲ್ ಫ್ಲಿಂಟ್ ಪ್ರಸಿದ್ಧ ಜಲವರ್ಣ ಚಿತ್ರ ಕಲಾವಿದ. ಫ್ಲಿಂಟರ ಹಾಗೆ ತಾನಾಗಬೇಕೆಂದು ಹಂಬಲಿಸಿದರು. ಅವರ ಕಲೆಯ ಅಧ್ಯಯನ ನಡೆಸಿದರು. ಅವರು ಬಳಸುವ ವಸ್ತು, ರೂಪದರ್ಶಿ, ಹಿನ್ನಲೆಯ ಆವರಣ, ನೆರಳುಬೆಳಕಿನ ಬಳಕೆಯ ಕುರಿತು ಚಿಂತನ ನಡೆಸಿ ತಾನು ಕೃತಿ ರಚಿಸುವಾಗ ಯಾವ ಬಗೆಯದಾಗಿ ರೂಪಗಳನ್ನು ಆಯ್ಕೆ ಮಾಡಿಕೊಳ್ಳಬೇಕು? ಅದು ಒಂದು ಉತ್ಕೃಷ್ಟ ಕೃತಿಯಾಗುವಂತೆ ಹೇಗೆ ನೋಡಿಕೊಳ್ಳಬೇಕು? ಎಂದೆಲ್ಲ ಆಲೋಚಿಸಿ ಚಿತ್ರಗಳನ್ನು ಬಿಡಿಸುತ್ತ ಹೋದರು.

ಅವರು ಕಲೆಯನ್ನು ಆತ್ಮಕ್ಕೆ ಹಚ್ಚಿಕೊಂಡವರಾಗಿದ್ದರಿಂದ ಉತ್ತಮೋತ್ತಮ ಕೃತಿಗಳು ಜನ್ಮ ತಾಳಿದವು. ಅನೇಕ ಮಾಡೆಲ್‌ಗಳನ್ನು ಉಪಯೋಗಿಸಿ ಜಲವರ್ಣದಲ್ಲಿ ರಚಿಸಿದ ಬಿ.ಕೆ.ಯವರ ಕೃತಿಗಳು ಒಂದಕ್ಕಿಂತ ಒಂದು ಶ್ರೇಷ್ಠ ಮಟ್ಟದ ಕೃತಿಗಳಾಗಿ ಅರಳಿದವು. ಅವರ ರೇಖೆಗೂ ಅದೇ ಥಾಟು, ಅದೇ ಕಲಾತ್ಮಕ ಸ್ಪರ್ಶದ ಹೊಳಪು. ಇಂಗ್ಲೀಷ್ ಕಲಾವಿದರ ಪ್ರಭಾವವನ್ನು ಬಳಸಿಕೊಂಡರೂ ದೇಶೀತನವನ್ನು ಬಿಟ್ಟುಕೊಟ್ಟಿರಲಿಲ್ಲ. ಅದಕ್ಕೆ ಕಾರಣವೆಂದರೆ ನಮ್ಮವರ ಸಂಸ್ಕಾರ ಎನ್ನುವುದನ್ನು ಮರೆಯುವಂತಿಲ್ಲ.

**ದೇಶೀತನದ ಸಂಸ್ಕಾರ**

ಹುಬಳಿಯವರು ಗ್ರಾಮೀಣ ಸಂಸ್ಕೃತಿಯ ನಿಜವಾದ ಅರಿವಿದ್ದ ಕಲಾವಿದರು. ಬೆಳಗಾವಿ ಪಕ್ಕದ ಊರುಗಳಲ್ಲಿ ಹಚ್ಚ ಹಸಿರಿನ ರಮ್ಯತೆ ಹೇರಳ. ಹಳ್ಳಿಗರ ದೈನಂದಿನ ಬದುಕು ಅವರ ಚಿತ್ರಕಾವ್ಯದ ಆಶಯವಾಯಿತು. ಅಲ್ಲದೆ ಮನೆಗೆ ಗ್ರಾಮೀಣ ಪರಿಸರದ ಕಲಾವಿದರು ಬರುತ್ತಿದ್ದರು. ಅವರಲ್ಲಿ ಬಹಳಷ್ಟು ಮಂದಿ ಕಲಾವಿದರು ಸಂಬಂಧಿಕರೇ ಆಗಿದ್ದರು.

ಸಂಬಂಧಿಕರೆಲ್ಲರೂ ಮೂರ್ತಿ ತಯಾರಕರು ಮತ್ತು ಶಿಲ್ಪಿಗಳು. ಬೆಳ್ಳಿಯ ವಿವಿಧ ಮೂರ್ತಿಗಳನ್ನು ನಿರ್ಮಿಸುತ್ತಿದ್ದರು. ದೇವತಾ ಕೃತಿ ನಿರ್ಮಾಣ, ಮಂಟಪ ವಿನ್ಯಾಸ ಹಾಗೂ ಬಗೆಬಗೆಯ ಆಭರಣ ವಿನ್ಯಾಸಗಾರರು. ಮಣ್ಣಿನಲ್ಲಿ ಮೂರ್ತಿ ಮಾಡುವವರು, ದೈವೀಕಲ್ಪನೆಗೆ ಸಾಕಾರತೆ ತಂದುಕೊಡುವಂಥವರು. ಅವರ ಪ್ರಭಾವ ಸಹಜವಾಗಿಯೇ ಹುಬಳಿ ಸ್ವೀಕಾರ ಮಾಡಿಕೊಂಡಿದ್ದಾರೆ.

ಬಿ.ಕೆ.ಹುಬಳಿಯವರ ಮಡದಿ ಶ್ರೀಮತಿ ಗಿರಿಜಾ ಹುಬಳಿಯವರು ಉತ್ತಮ ಮಣ್ಣಿನ ಮೂರ್ತಿ ನಿರ್ಮಿಸುವಲ್ಲಿ ಪಳಗಿದವರು. ಗಣಪತಿ ಮತ್ತು ಹಲವು ಪ್ರಕಾರದ ಗೊಂಬೆಗಳನ್ನು ನಿರ್ಮಿಸುವ ಹವ್ಯಾಸವನ್ನು ಬೆಳೆಸಿಕೊಂಡಿದ್ದಾರೆ. ನಮ್ಮ ಪರಂಪರೆಯನ್ನು ಸಂಸ್ಕೃತಿಯನ್ನು ಸಲುಹಿ ಸಾಗುವ ಈ ಕೃತಿಗಳ ಉಪಯೋಗ ಹಬ್ಬ, ಯಾತ್ರೆ, ಆಚರಣೆಗಳಲ್ಲಿ ವಿಪುಲವಾಗಿ ಆಗುತ್ತದೆ. ದೇಶೀಯವೆನಿಸುವ ನಮ್ಮ ಕಲಾಪರಂಪರೆ ಒಂದು ಸಣ್ಣ ಎಸಳಾಗಿ ಹುಬಳಿಯವರಲ್ಲಿ ನುಸುಳಿದೆ.

## ಒಲಿದು ಬಂದ ಉದ್ಯೋಗ

ಡ್ರಾಯಿಂಗ್ ಹೇಳಿಕೊಡುವ ಶಿಕ್ಷಕನಿಗೆ ಇರಬೇಕಾದ ವಿದ್ಯಾರ್ಹತೆಯನ್ನಷ್ಟೆ ಪಡೆದಿರದೆ ಜೆ.ಜೆ.ನಲ್ಲಿ ಜಿ.ಡಿ.ಆರ್ಟ ಡಿಪ್ಲೋಮಾ ಪದವೀಧರರೂ ಆಗಿದ್ದ ಬಿ.ಕೆ.ಹುಬಳಿಯವರು ೧೯೫೪ರಲ್ಲಿ ಶಿಕ್ಷಕರಾಗಿ ರಜಪೂತ ಬಂಧು ಮಿಡಲ್ ಸ್ಕೂಲಿನಲ್ಲಿ ಸೇವೆಗೆ ಸೇರಿದರು. ಆನಂತರ ಎರಡು ವರ್ಷದ ತರುವಾಯ ಬಿ.ಕೆ.ಯವರಿಗೆ ಚಿಂತಾಮಣರಾವ ಹೈಸ್ಕೂಲಿನಲ್ಲಿ ಕಲಾ ಶಿಕ್ಷಕ ಸೇವೆಗೆ ಆಮಂತ್ರಣ ಬಂತು.

ಸಾಂಗಲಿ ಸಂಸ್ಥಾನಿಕರಾದ ಚಿಂತಾಮಣರಾವ ಹೆಸರಿನ ಚಿಂತಾಮಣರಾವ ಹೈಸ್ಕೂಲಿನಲ್ಲಿ ೧೯೫೭ರಲ್ಲಿ ಕೆಲಸಕ್ಕೆ ಹಾಜರಾದ ಬಿ.ಕೆ.ಯವರು ೧೯೭೭ರಲ್ಲಿ ನಿವೃತ್ತಿ ಹೊಂದಿದರು. ನಿವೃತ್ತಿಗೆ ಮುಂಚೆ ಚಿಂತಾಮಣರಾವರ ಮಡದಿ ರಾಣಿ ಸರಸ್ವತಿ ಅವರ ಹೆಸರಿನ ಹೈಸ್ಕೂಲಾದ ಸರಸ್ವತಿ ಗರ್ಲ್ಸ ಹೈಸ್ಕೂಲಿನಲ್ಲಿ ಸೇವೆಗೈದರು.

ಕಲಾ ಶಿಕ್ಷಕರಾಗಿ ಸೇವೆಯ ಜೀವನ ಬಿ.ಕೆ.ಯವರಿಗೆ ಅತೀವ ನೆಮ್ಮದಿ ತೃಪ್ತಿಯನ್ನು ತಂದ ಬದುಕು. ವಿದ್ಯಾರ್ಥಿಗಳ ನೆಚ್ಚಿನ ಕಲಾಶಿಕ್ಷಕರು. ಕಲೆಯನ್ನು ಜೀವದಂತೆ ಪ್ರೀತಿಸುವ ಹುಬಳಿಯವರು ಹಲವು ಕಲಾವಿದರನ್ನು

ತಮ್ಮ ಸೇವಾವಧಿಯಲ್ಲಿ ನಾಡಿಗೆ ನೀಡಿದ್ದಾರೆ. ಅವರಿಗೆ ಶಾಲೆಯ ಎಲ್ಲ ಸಿಬ್ಬಂದಿಯ ಸಹಕಾರವಿತ್ತು. ವ್ಯವಹಾರಿಕ ಸ್ವಭಾವವಲ್ಲದ ಬಿ.ಕೆ ಶುಲ್ಕ ತೆಗೆದುಕೊಳ್ಳದೆ ಕ್ಲಾಸುಗಳನ್ನು ನಡೆಸುತ್ತಿದ್ದರು. ಕಲೆಯನ್ನು ವಿದ್ಯಾರ್ಥಿಗಳಿಗೆ ಕಲಿಸುವುದು ಅವರ ಗುರಿಯಾಗಿತ್ತು. ಹೀಗಾಗಿ ಅಪಾರ ಶಿಷ್ಯವೃಂದ ಹೊಂದಿದ ಬಿ.ಕೆ.ಯವರನ್ನು ನಿವೃತ್ತಿ ಸಂದರ್ಭದಲ್ಲಿ ಅವರ ಅಭಿಮಾನಿ ಬಳಗ ಅದ್ದೂರಿಯಾಗಿ ಸತ್ಕಾರ ಸಮಾರಂಭ ಮಾಡಿ ಗೌರವಿಸಿದರು.

## ನಿಸ್ವಾರ್ಥ ಸ್ವಭಾವ

ಬಿ.ಕೆ. ಹುಬಳಿ ಹಣದಾಸೆಗೆ ಕಲೆಯನ್ನು ಬಳಸಿಕೊಳ್ಳಲಿಲ್ಲ. ಅವರ ಸ್ವಭಾವದಲ್ಲಿ ಅದು ಇಲ್ಲವೇ ಇಲ್ಲ. ತಮ್ಮ ಜೀವಮಾನದಲ್ಲಿ ಹಣಬೇಡಿ ಕೇಳಿದವರಲ್ಲ. ಫೀ ಸ್ವೀಕರಿಸದೆ ಹುಡುಗರಿಗೆ ಕಲಾಭ್ಯಾಸ ನೀಡಿದರು. ತಮ್ಮ ಮೌಲಿಕ ಕೃತಿಗಳನ್ನು ಸ್ನೇಹಿತರು, ಬಂಧುಗಳಿಗೆ ಪುಕ್ಕಟ್ಟೆ ಕೊಟ್ಟರು. "ಇನ್ನೂ ತನಕ ದುಡ್ಡು ಮಾಡೋದು ಗೊತ್ತಾಗಲಿಲ್ಲ. ಹಣ ಬೇಡಿ ಇಸಕೊಳ್ಳೋದು ನನ್ನ ಕಡೀಂದ ಆಗಲಿಲ್ಲ. ಭಾಳಷ್ಟು ಪೇಂಟಿಗ್ಸನ್ನು ಹಾಗೆಯೇ ಒಯ್ದಿದ್ದಾರೆ." ಎಂದು ಹೇಳುವ ತೆರದ ಮನದ ಮಾತುಗಳಲ್ಲಿ ನಿಸ್ವಾರ್ಥ ಕಲಾವಿದನ ಪರಿಚಯವಾಗುತ್ತದೆ.

ಇವತ್ತು ಕಲೆಗೆ ಒಳ್ಳೆಯ ಮಾರಾಟ ವ್ಯವಸ್ಥೆಯಿದೆ. ಮಾರಾಟವೇ ಮೂಲ ಉದ್ದೇಶವಾಗಿಟ್ಟುಕೊಂಡು ತೊಡಗಿಸಿಕೊಂಡ ಕಲಾವಿದರು ಬಹು ಸಂಖ್ಯೆಯಲ್ಲಿರುವಾಗ ಬೆಳ್ಳಿಚುಕ್ಕೆ ಹಾಗೆ ಬಿ.ಕೆ.ಯಂಥ ಕಲಾವಿದರು ಗೋಚರಿಸುತ್ತಾರೆ. ಇದು ಅವರ ನಿಸ್ವಾರ್ಥ ಸೇವಾಧೋರಣೆ. ಸ್ವಭಾವತಃ ಮೃದುಭಾಷಿ ಹಾಗೂ ಮುಗ್ಧತೆಯನ್ನು ತನ್ನದಾಗಿಸಿಕೊಂಡಿರುವ ಬಿ.ಕೆ. ಹುಬಳಿಯವರಿಗೆ ಶತ್ರುಗಳೇ ಇಲ್ಲವೆನ್ನಬಹುದು. ಯಾರ ಮನಸ್ಸನ್ನು ನೋಯಿಸದ ಪ್ರೀತಿಗರೆಯುತ್ತ ಹಿರಿ-ಕಿರಿಯರನ್ನು ಹಚ್ಚಿಕೊಳ್ಳುವವರು. ಯಾವ ಪ್ರಚಾರದ ಅಬ್ಬರಕ್ಕೊಳಗಾಗದೇ, ಗಿಮಿಕ್ ಪದದಿಂದ ಮೈಲುದ್ದ ದೂರವಿರುವ ಬಿ.ಕೆ. ತಣ್ಣಗೆ ತನ್ನ ಖುಷಿಗೆ, ಆನಂದಕ್ಕೆ ಚಿತ್ರಕೃತಿ ರಚಿಸುತ್ತ ಬಂದವರು.

ಕಲೆಯ ವ್ಯಾಪಾರಿ ಮನೋಧರ್ಮವೇ ಇವರಲ್ಲಿ ಇಲ್ಲದಿರುವಾಗ ಕಲೆಯ ಪ್ರದರ್ಶನ ಮಾಡುವ ಗೋಜಿಗೆ ಬಿ.ಕೆ. ಹೋಗಲಿಲ್ಲ. ಚಿತ್ರ ರಚಿಸಿ ಮನೆಯಲ್ಲಿ ಇಟ್ಟಾಗ ಮನೆಗೆ ಬಂದ ಅತಿಥಿ, ಸ್ನೇಹಿತರಿಗೆ, ಸಂಬಂಧಿಕರಿಗೆ

ತೋರಿಸುತ್ತಿದ್ದರು. ಆದರೆ ಚಿತ್ರಕಲೆಯ ಒಟ್ಟು ಸಂಕಲನದ ಪ್ರದರ್ಶನವನ್ನು ಅವರು ಮಾಡಲಿಲ್ಲ. ಒಂದು ಪ್ರದರ್ಶನ ಮಾತ್ರ ಅವರನ್ನು ಶಿಷ್ಯ ವೃಂದ ವಾಜ್ಞಯ ಚರ್ಚಾ ಮಂಡಳದಲ್ಲಿ ಸತ್ಕರಿಸಿದಾಗ ನಡೆಯಿತು. ಡಿಪ್ಲೊಮಾದಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳು ಗೌರವಿಸಿದಾಗ ಬಿ.ಕೆ.ಹುಬಳಿ ತಮ್ಮ ಕಲೆಯ ಪ್ರದರ್ಶನ ನಡೆಸಿದರು. ಜಲ, ತೈಲವರ್ಣ ಮಾಧ್ಯಮದ ಹದಿನೈದು ಕೃತಿಗಳ ಪ್ರದರ್ಶನವು ಅದು. ಅಲ್ಲಲ್ಲಿ ನಡೆದ ಶಿಬಿರ, ಅಕಾಡೆಮಿಯಲ್ಲಿ ಬಿಡಿಕೃತಿಗಳ ಪ್ರದರ್ಶನಗಳಲ್ಲಿ ಬಿ.ಕೆ. ಅವರ ಕೃತಿ ಗಳಿವೆ.

## ಈಗೀಗ ಕಲಾವಿದನಾಗಿದ್ದೇನೆ

ಒಬ್ಬ ಪರಿಪಕ್ವ ಕಲಾವಿದ ಇಡಿಯಾಗಿ ಮಾಗಿದ ಬಳಿಕವೇ ತಾನೊಬ್ಬ ಕಲಾವಿದನೆಂದು ಒಪ್ಪಿಕೊಳ್ಳುತ್ತಾನೆ ವಿನಹ ರೇಖೆ, ಬಣ್ಣಗಳ ಪ್ರಯೋಗ ಮಾಡಿದೊಡನೆ ಕಲಾವಿದನಾದೆ ಎಂದು ಅಂದುಕೊಳ್ಳುವದಿಲ್ಲ. ಬಿ.ಕೆ. ಒಬ್ಬ ಪರಿಪಕ್ವ ಕಲಾವಿದರ ಪಂಕ್ತಿಗೆ ಸೇರಿದವರು. ತಮ್ಮನ್ನು ತಾವು ಪ್ರಶ್ನಿಸಿಕೊಳ್ಳುವ ಛಾತಿ ಇದ್ದವರು. "ನಾನು ಈಗೀಗ ಕಲಾವಿದನಾಗಿದ್ದೇನೆ ಅಂತ ಅನಿಸಲಿಕ್ಕೆ ಹತ್ತದ. ಯಾಕೆಂದರೆ ಇಂಗ್ಲೀಷ ಕಲೆಗಳ ಜತೆ ಕಂಪೇರ ಮಾಡಿಕೋತಿದ್ದವಿ. ಹೀಗಾಗಿ ಆ ಮಟ್ಟಕ್ಕ ಬರೋತನಕ ಸಿಗ್ನೇಚರ ಹಾಕೋದಕ್ಕು ನಾಚಿಕಿ ಅನಿಸುತ್ತಿತ್ತು. ನಾನಿನ್ನು ಕಲಾವಿದನಾಗಿಲ್ಲ ಅನಿಸ್ತಿತ್ತು. ಒಂದು ಸ್ಟ್ಯಾಂಡರ್ಡಕ್ಕ ಬಂದಾಗ ಕಲಾವಿದನಾಗತಾನ, ತೃಪ್ತಿನೂ ಸಿಗತೈತಿ.." ಇವು ಬಿ.ಕೆ. ಅವರ ಒಡಲಾಳದಿಂದ ಹರಿದ ಪ್ರಾಮಾಣಿಕ ಮಾತುಗಳು.

ಆ ಹಿರಿಯ ಜೀವ ತನ್ನನ್ನ ಕಲಾವಿದ ಅಂತ ಕರೆದುಕೊಂಡದ್ದು ತುಂಬಾ ಇಳಿವಯಸ್ಸಿನಲ್ಲಿ. ಯಾಕೆಂದರೆ ಕಲೆ ಒಲಿಯುವುದು ನಿರಂತರವಾದ ಒಂದು ತಪಸ್ಸಿನ ಹಂತ ಮುಕ್ತಾಯ ಕಂಡ ನಂತರ. ಬಿ.ಕೆ. ಈ ವಿಚಾರದಲ್ಲಿ ಬೆಳೆದವರು. ಕರ್ನಾಟಕ ಲಲಿತಕಲಾ ಅಕಾಡೆಮಿ ಅವರ ಕೃತಿಯೊಂದಕ್ಕೆ ಪ್ರಶಸ್ತಿ ನೀಡಿದಾಗ ಬಿ.ಕೆ. ಯವರು ತಮ್ಮನ್ನು ಕಲಾವಿದ ಎಂದು ಕರೆದುಕೊಂಡರು. ಒಂದಷ್ಟು ಬಿಡಿ ಬಿಡಿ ಕೃತಿಗಳು ಕ್ಯಾಲಿಫೋರ್ನಿಯಾ ವಿ.ವಿ ಸಂಗ್ರಹ ಸೇರಿದಾಗ ಅವರು ಕಲಾವಿದನಾದೆನೆಂಬ ಸಂತುಷ್ಟತೆಯ ಉಸಿರು ಬಿಟ್ಟರು.

## ಲಲಿತಕಲಾ ಅಕಾಡೆಮಿ ಸದಸ್ಯ

ಪ್ರಖ್ಯಾತ ಕಲಾವಿದ ಅರ್.ಎಂ. ಹಡಪದ ಅವರು ಕರ್ನಾಟಕ

ಲಲಿತಕಲಾ ಅಕಾಡೆಮಿ ಅಧ್ಯಕ್ಷರಾದಾಗ ಇದೇ ಅವಧಿಯಲ್ಲಿ ಬಿ.ಕೆ.ಹುಬಳಿ ಸದಸ್ಯರಾಗಿ ಸೇವೆ ಸಲ್ಲಿಸಿದರು. ಕ್ರಿಯಾಶೀಲ ಹಾಗೂ ಚಿಂತನಶೀಲ ಕಲಾವಿದ ಆರ್.ಎಂ.ಹಡಪದರ (೧೯೮೭ರಿಂದ ೧೯೯೦)ಕಾಲ ಅಕಾಡೆಮಿಯ ಬಿರುಸಿನ ಚಟುವಟಿಕೆಯ ಸಂಭ್ರಮದ ಸಮಯ. ಅಕಾಡೆಮಿ ಹಲವಾರು ಗುರುತರವಾದ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ಅದನ್ನು ಸಾಕಾರಗೊಳಿಸಿತು. ಅಕಾಡೆಮಿ ಹೊಸ ಆಲೋಚನೆಯೊಂದಿಗೆ ಕ್ರಿಯೆಗಿಳಿದು ಹೊಸ ದಿಕ್ಕನ್ನು ಶೋಧಿಸಿಕೊಂಡಿತು.

ಅಕಾಡೆಮಿಯ ಹಲವಾರು ಯೋಜನೆಗಳಲ್ಲಿ ಪ್ರಾಚೀನ ಕಲೆಯನ್ನು ಜತನವಾಗಿರಿಸಿಕೊಂಡು ಹೋಗುವ ವಿಚಾರ ನಿಜಕ್ಕೂ ಪ್ರಶಂಸನೀಯ. ಪ್ರತಿಭಾವಂತ ಕಲಾವಿದರಿಂದ ಅವುಗಳ ನಕಲು ತಯಾರಿಸುವ, ಅವುಗಳನ್ನು ದಾಖಲೆಗೊಳಿಸುವ ಯೋಜನೆಯೂ ನಡೆಯಿತು.

ಬಿ.ಕೆ.ಹುಬಳಿಯವರ ನೇತೃತ್ವದಲ್ಲಿ ಇನ್ನೊಂದು ಮಹತ್ವದ ಕಾರ್ಯ ನಡೆಯಿತು. ಬೆಳಗಾವಿ ಜಿಲ್ಲೆ ನಿಪ್ಪಾಣಿ ನಗರದಲ್ಲಿರುವ ವಾಡೆಯ ಭಿತ್ತಿ ಚಿತ್ರಗಳದ್ದು, ನಿಪ್ಪಾಣಿ ಕರ್ನಾಟಕದ ಗಡಿಯಲ್ಲಿರುವ ಕಟ್ಟಕಡೆಯ ನಗರ. ಅಕಾಡೆಮಿಯ ಕಲಾತಂಡ ನಿಪ್ಪಾಣಿ ವಾಡೆಯಲ್ಲಿ ಠಿಕಾಣಿ ಹೂಡಿತು. ಐತಿಹಾಸಿಕವಾಗಿ ಮಹತ್ವದ್ದೆನಿಸಿದ ಭಿತ್ತಿಚಿತ್ರಗಳು ನಶಿಸಿಹೋಗುವ ಸ್ಥಿತಿಯಲ್ಲಿದ್ದವು. ಅವುಗಳನ್ನು ನಕಲು ಮಾಡಲಾಯಿತು. ಈ ದೊಡ್ಡ ಹೊಣೆಗಾರಿಕೆ ಬಿ.ಕೆ. ಹುಬಳಿಯವರ ಮೇಲಿತ್ತು. ಜಲವರ್ಣ ಮಾಧ್ಯಮದಲ್ಲಿ ಮೂಡಿದ 'ರಿಪ್ರೊಡಕ್ಷನ್'ಗಳು ಅಕಾಡೆಮಿ ಸಂಗ್ರಹವನ್ನು ಸೇರಿದವು. ಈ ಬಗೆಯ ಮಹತ್ವದ ದಾಖಲೀಕರಣದ ಶ್ರೇಯಸ್ಸು ಬಿ.ಕೆ.ಅವರಿಗೆ ಸೇರತಕ್ಕದು.

**ಸಂದರ್ಶಕ ಉಪನ್ಯಾಸಕ**

ಬದುಕಿನುದ್ದಕ್ಕೂ ತಾನೇನನ್ನೂ ಬಯಸದೇ ತನ್ನೊಳಗಿದ್ದುದೆಲ್ಲವನ್ನು ಇತರರಿಗೆ ಧಾರೆಯೆರೆದ ಬಿ.ಕೆ.ಹುಬಳಿ ತಮ್ಮ ವಿಚಾರಗಳನ್ನು, ಕಲಾಭಿವ್ಯಕ್ತಿಯನ್ನು ನೀಡುತ್ತ ಸಾಗಿದರು. ನಿವೃತ್ತಿಯ ಬಳಿಕ ಕೆಲವು ಕಾಲ ತಮ್ಮದೇ 'ಫೈನ್ ಆರ್ಟ ಇನ್‌ಸ್ಟಿಟ್ಯೂಟ್' ತೆರೆದು ಅನೇಕ ಶಿಷ್ಯ ಸಮೂಹವನ್ನು ಸಿದ್ಧಗೊಳಿಸಿದರು. ದಾವಣಗೆರೆಯ ಕಲಾ ಶಾಲೆ ಅನೇಕ ಖ್ಯಾತನಾಮ ಕಲಾವಿದರನ್ನು ಹೊಂದಿದ ಕಲಾತಾಣ. ವಿ.ಬಿ.ಹಿರೇಗೌಡರ, ಶಂಕರ ಪಾಟೀಲ, ಸೂಗೂರ, ಕಾಳಿದಾಸ ಪತ್ತಾರರಂಥ ಸೃಜನಶೀಲ

ಕಲಾವಿದರು ಬಿ.ಕೆ.ಹುಬಳಿಯವರ ಪ್ರಯೋಜನ ಪಡೆಯಲು ನಿರ್ಧರಿಸಿದರು.

ಹೀಗಾಗಿ ಕೆಲವು ಸಮಯ ಬಿ.ಕೆ.ಹುಬಳಿಯವರು ದಾವಣಗೆರೆಯ ಕಲಾ ಶಾಲೆಯಲ್ಲಿ ಚಿತ್ರಕಲೆಯ ಕುರಿತು ವಿದ್ಯಾರ್ಥಿಗಳಿಗೆ ಉಪನ್ಯಾಸ ನೀಡಿದರು. ಜತೆಗೆ ಜಲವರ್ಣ ಮತ್ತು ತೈಲವರ್ಣದಲ್ಲಿ ಪ್ರಯೋಗಗಳನ್ನು ನಡೆಸಿ ಪ್ರಾತ್ಯಕ್ಷಿಕೆಗಳನ್ನೂ ಸಹ ನೀಡಿ ಕಲೆಯ ಕುರಿತಾದ ಆಸಕ್ತಿ ಕಲಾವಿದ್ಯಾರ್ಥಿಗಳಲ್ಲಿ ಮೂಡುವಂತೆ ಮಾಡಿದರು. ಹಂಪಿಯ ಸುಂದರ ಕಲ್ಲು ಬಂಡೆಗಳು ನಾಡಿನ ಸಂಸ್ಕೃತಿಯ ಒಂದೊಂದು ಚಿತ್ರಕಾವ್ಯವಾಗಿದೆ. ಆ ಹಂಪಿ ಇವರನ್ನು ಕೈ ಬೀಸಿ ಕರೆಯಿತು. ಹಂಪಿಯಲ್ಲೂ ಪ್ರಾತ್ಯಕ್ಷಿಕೆ ಪ್ರದರ್ಶನ ನೀಡಿದರು.

ಬೆಳಗಾವಿ ನಗರದ ಅಂಗವಿಕಲ ಶಾಲೆಯಲ್ಲೂ ವಿದ್ಯಾರ್ಥಿಗಳಿಗೆ ಕಲೆಯ ಕುರಿತಾದ ವ್ಯಾಖ್ಯಾನ ಬಿ.ಕೆ. ಅವರಿಂದ ನಡೆದಿದೆ. ಅಂಗವಿಕಲರಾದ ಪುಟಾಣಿಗಳಲ್ಲಿ ಸುಪ್ತವಾಗಿದ್ದ ಕಲಾಪ್ರತಿಭೆ ಎಚ್ಚರಗೊಳಿಸುವಲ್ಲಿ ಹುಬಳಿಯವರ ವ್ಯಾಖ್ಯಾನ ಪ್ರಾತ್ಯಕ್ಷಿಕೆ ಸಾಕಷ್ಟು ಸಹಕಾರಿಯಾದುದರಲ್ಲಿ ಎರಡು ಮಾತಿಲ್ಲ. ನಿವೃತ್ತಿಯ ನಂತರ ತಮ್ಮನ್ನು ಸ್ವತಃ ತೊಡಗಿಸಿಕೊಂಡು ನಾಡಿನ ಅನೇಕ ಕಡೆಗೆ ಹೋಗಿ ತಮ್ಮ ಕಲಾನುಭವವನ್ನು ಇತರರಿಗೆ ಹಂಚಿದ್ದಾರೆ ಬಿ.ಕೆ.ಹುಬಳಿಯವರು.

## ಪ್ರಶಸ್ತಿಗಳು

ಹಲವರು ಪ್ರಶಸ್ತಿಗಾಗಿ ಕೆಲಸ-ಕಾರ್ಯ ನಿರ್ವಹಿಸಿ ಅದಕ್ಕಾಗಿ ಹಪಾಹಪಿಸುತ್ತಾರೆ. ಇನ್ನು ಕೆಲವರು ತಮ್ಮಷ್ಟಕ್ಕೆ ತಾವು ಆತ್ಮತೃಪ್ತಿಗಾಗಿ, ಸಮಾಜಕ್ಕಾಗಿ ಖುಷಿಯಿಂದ ಕೆಲಸಗಳನ್ನು ಮಾಡುತ್ತಾ ಬಂದಿರುತ್ತಾರೆ. ಇಂಥವರಿಗೆ ಪ್ರಶಸ್ತಿ, ಗೌರವಗಳು ತಾವೇ ಬೆನ್ನಟ್ಟಿಕೊಂಡು ಬರುತ್ತವೆ. ಸಮಾಜಕ್ಕೆ ಕಲಾವಿದ-ಸಾಹಿತಿ ಕೊಡುಗೆ ನೀಡಿದಾಗ ಸಮಾಜ ಅಥವಾ ಸರಕಾರಗಳು ಅಂಥವರ ಸೇವೆ ಮತ್ತು ಕೊಡುಗೆಯನ್ನು ಗಮನಿಸಿ ಗೌರವಿಸುತ್ತ ಬಂದಿವೆ. ಈ ಪರಿಪಾಠ ಹಿಂದಿನಿಂದ ಬಂದಿದೆ. ಪ್ರಾಚೀನ ಕಾಲದಲ್ಲಿ ರಾಜರು, ಸಂಸ್ಥಾನಿಕರು ಕವಿ, ಕಲಾವಿದರನ್ನು ಗೌರವಿಸಿ ಉಂಬಳಿ, ಇನಾಮುಗಳನ್ನು ನೀಡುತ್ತಿದ್ದರು. ಈಗ ಸರಕಾರದ ಅಧೀನದಲ್ಲಿರುವ ಅಕಾಡೆಮಿಗಳು, ಇಲಾಖೆಗಳು ಸಾಂಸ್ಕೃತಿಕವಾಗಿ ಸಾಮಾಜಿಕವಾಗಿ ಗಮನಾರ್ಹ ಕೊಡುಗೆ ಕೊಟ್ಟವರನ್ನು ಗುರುತಿಸಿ ಪ್ರಶಸ್ತಿ ನೀಡಿ

ಗೌರವಿಸುತ್ತಿವೆ. ಸಮಾಜದ ಬೆಳವಣಿಗೆಗೆ ಹುಟ್ಟಿಕೊಂಡ ಕೆಲವು ಸಂಘ ಸಂಸ್ಥೆಗಳೂ ಸಹ ಇದೇ ಬಗೆಯ ಕಾರ್ಯನಿರ್ವಹಿಸುತ್ತ ಬಂದಿರುವುದು ಆರೋಗ್ಯಕರವಾದ ಲಕ್ಷಣವಾಗಿದೆ.

ಬಿ.ಕೆ.ಹುಬಳಿಯವರಿಗೆ ಪ್ರಶಸ್ತಿಗಳು ಅವರ ಮನೆ ಬಾಗಿಲಿಗೆ ಅವರನ್ನು ಹುಡುಕಿಕೊಂಡೇ ಬಂದಿವೆಯೆಂದರೆ ಅತಿಶಯೋಕ್ತಿ ಮಾತಲ್ಲ. ಯಾವ ಪ್ರಚಾರದ ಅಬ್ಬರಕ್ಕೆ ಹೋಗದೆ ತನ್ನ ಪಾಡಿಗೆ ತಾನು ಚಿತ್ರಕಲೆಗೆ ಇಡಿಯಾಗಿ ಸಮರ್ಪಿಸಿಕೊಂಡಿರುವ ಬಿ.ಕೆ.ಯವರಿಗೆ ಪ್ರಶಸ್ತಿಗಳು ಹುಡುಕಿಕೊಂಡು ಬಂದಿವೆ. ೧೯೬೮ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ಪ್ರಶಸ್ತಿ ಬಿ.ಕೆ.ಹುಬಳಿಯವರ 'ನಾದ ತರಂಗಿಣಿ' (Ecstasy)ಗೆ ಸಿಕ್ಕಿದೆ. ಮಹಿಳೆಯೋರ್ವಳು ವೀಣೆಯ ನುಡಿಸುತ್ತ ಮಗ್ನಳಾದ ಜಲವರ್ಣದಲ್ಲಿ ಮೂಡಿದ ಕೃತಿ. ಬಹುಸುಂದರವಾಗಿ ಅಭಿವ್ಯಕ್ತಿಗೊಂಡು ಕಲಾವಿದನ ಆಶಯ ವಿಚಾರ ನೋಡುಗರಲ್ಲಿ ಮೃದು ಮತ್ತು ಕೋಮಲ ಭಾವನೆಗಳನ್ನು ಹುಟ್ಟಿಸುತ್ತದೆ. ಕಲಾನಿರ್ವಹಣೆ ಅದ್ಭುತವಾಗಿದೆ. ಒಂದು ಸಾವಿರ ರೂಪಾಯಿ ನಗದು ಮತ್ತು ಪ್ರಶಸ್ತಿ ಪತ್ರ ಈ 'ನಾದತರಂಗಿಣಿ'ಗೆ ಸಿಕ್ಕಿದೆ.

೧೯೮೨ರಲ್ಲಿ ಇವರ ಇನ್ನೊಂದು ಜಲವರ್ಣ ಕೃತಿ 'ಹಳ್ಳಿ'ಗೆ ಲಲಿತಕಲಾ ಅಕಾಡೆಮಿ ಪ್ರಶಸ್ತಿ ಬಂತು. ಹಳ್ಳಿಯ ದೃಶ್ಯವೊಂದನ್ನು ಕಲಾಭಿವ್ಯಕ್ತಿಗೆ ವಸ್ತುವಾಗಿ ಆಯ್ಕೆ ಮಾಡಿಕೊಂಡ ಹುಬಳಿ ಗ್ರಾಮೀಣ ಸಂಸ್ಕೃತಿಯ ಒಂದು ಮಗ್ಗುಲವನ್ನು ಸಮರ್ಥವಾಗಿ ಬಿಂಬಿಸಿದ್ದಾರೆ. ಅವರ ಜಲವರ್ಣಗಳ ಬಳಕೆ ಮತ್ತು ಪ್ರಯೋಗ ಗುಣ ಬೆರಗು ಹುಟ್ಟಿಸುತ್ತದೆ. ಗುಡಿಸಲು ಸಾಲು ಮತ್ತು ಭಾಗಶಃ ಮುರುಕಾದ ಮನೆಯೆದುರು ಮಗುವೆನ್ನೆತ್ತಿಕೊಂಡು ನಿಂತ ಹುಡುಗಿ, ಕುಳಿತ ಮಗುವಿನ ಚಿತ್ರ ನಮ್ಮ ಹಳ್ಳಿಯ ಬದುಕನ್ನು ಚಿತ್ರಿಸುತ್ತದೆ. ಈ ಪ್ರಶಸ್ತಿ ಐದು ಸಾವಿರ ರೂಪಾಯಿ ಬಹುಮಾನ ಮತ್ತು ಪ್ರಶಸ್ತಿ ಫಲಕವನ್ನೊಳಗೊಂಡಿದೆ.

ಬಿ.ಕೆ.ಹುಬಳಿಯವರು ಕಲೆಯನ್ನು ತಮ್ಮ ಜೀವನದ ಬಹು ಮುಖ್ಯವಾದ ಭಾಗವಾಗಿಸಿಕೊಂಡು ಬೆಳೆಸಿಕೊಂಡು ಬಂದವರು. ಅವರ ಈ ಸಮಗ್ರ ಕಲಾಸೇವೆಯನ್ನು ಪರಿಗಣಿಸಿ ಕರ್ನಾಟಕ ಲಲಿತಾಕಲಾ ಅಕಾಡೆಮಿಯು ೧೯೯೨ರಲ್ಲಿ 'ಗೌರವ ಪ್ರಶಸ್ತಿ'ಯನ್ನು ನೀಡಿ ಗೌರವಿಸಿತು. ಹತ್ತು ಸಾವಿರ ರೂಪಾಯಿಗಳ ನಗದು ಮತ್ತು ಪ್ರಶಸ್ತಿ ಫಲಕ ಹೊಂದಿದ ಈ ಪ್ರಶಸ್ತಿ ಬಿ.ಕೆ.ಯವರ ಸಾಧನೆಗೆ ಗೌರವ ಕಿರೀಟವಿದ್ದಂತೆ. ಇಂಥ

ಹಿರಿಯ ಚೇತನವನ್ನು ಗೌರವಿಸಿದ ಕೀರ್ತಿಯೂ ಅಕಾಡೆಮಿಗೆ ಸಲ್ಲುತ್ತದೆ.

ಪ್ರತಿವರ್ಷ ನವೆಂಬರ ೧ರಂದು ರಾಜ್ಯೋತ್ಸವ ಪ್ರಶಸ್ತಿಯನ್ನು ಕರ್ನಾಟಕ ಸರಕಾರವು ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದವರಿಗೆ ನೀಡುತ್ತ ಬಂದಿದೆ. ೧೯೯೬ರ ಸಾಲಿನ ಚಿತ್ರಕಲೆಗೆ ದೊರೆತ ಪ್ರಶಸ್ತಿ ಆ ಕ್ಷೇತ್ರದಲ್ಲಿ ಗಮನಾರ್ಹ ಎನಿಸಿದ ಬಿ.ಕೆ.ಹುಬಳಿಯವರಿಗೆ ಸಂದಿತು. ೧೯೯೬ರ ಈ ರಾಜ್ಯೋತ್ಸವ ಪ್ರಶಸ್ತಿಯು ಚಿನ್ನದ ಪದಕ ಮತ್ತು ಪ್ರಶಸ್ತಿ ಫಲಕವನ್ನು ಹೊಂದಿದೆ. ಈ ಪ್ರಶಸ್ತಿಗಳು ಬಿ.ಕೆ.ಯವರಿಗೆ ಹೊಸ ಚೈತನ್ಯ, ಹುರುಪು ತಂದಿವೆ. ಕಲೆಯ ಕುರಿತು ಚಿಂತನೆ ಮಾಡಲು ಹಚ್ಚಿವೆ. ಕ್ರಿಯಾಶೀಲತೆಯ ಹೊಣೆಗಾರಿಕೆಯನ್ನು ಹೆಚ್ಚಿಸಿವೆ. ಇಷ್ಟೆಲ್ಲ ಸಾಧನೆಯಿದ್ದರೂ ಜನರಲ್ಲಿ ಬೆರೆಯುವ ಸ್ವಭಾವ ಇವರಿಗಿಲ್ಲವಾದುದರಿಂದ ಹುಬಳಿಯವರು ಬಹಳಷ್ಟು ಜನರಿಗೆ ಅಪರಿಚಿತರಾಗಿ ಉಳಿದಿದ್ದಾರೆ. ಅವರ ಸಾಧನೆ ಹೆಚ್ಚೆಚ್ಚು ಬೆಳಕಿಗೆ ಬರಬೇಕು.

### ರೇಖಾಚಿತ್ರಗಳು

ಬಿ.ಕೆ.ಹುಬಳಿ ರೇಖಾ ವಿನ್ಯಾಸದ ಮೇಲೆ ಪ್ರಭುತ್ವ ಸಾಧಿಸಿದ ಕಲಾವಿದರು. ಕೃತಿ ರಚಿಸುವ ಮುಂಚೆ 'ಸ್ಕೆಚಸ್' ಸಿದ್ಧಪಡಿಸಿ ಅದನ್ನು ಜಲವರ್ಣದಲ್ಲಿ ಸೃಜನೆಮಾಡಿ ಮುಂದೆ ತೈಲಚಿತ್ರದಲ್ಲಿ ಚಿತ್ರ ರಚಿಸಿದ ಸಂದರ್ಭಗಳನ್ನೂ ಅವರು ಹೇಳುತ್ತಾರೆ. "ರೇಖಾ ಚಿತ್ರ ಒಂದು ಕೃತಿಯ ಜೀವಾತ್ಮ ಇದ್ದಂಗ. ಅದು ಕಲಾವಿದನ ಆಲೋಚನೆಗೆ ತಕ್ಕ ಹಾಂಗ ಮೂಡಿಬಂದರ, ಆಮೇಲೆ ವರ್ಣ ಸಂಯೋಜನೆಯ ಬಾಹ್ಯ ಸ್ವರೂಪಾನ ರಚಿಸಿ ಒಂದು ಒಳ್ಳೆ ಪೇಂಟಿಂಗ್ ಮಾಡಬಹುದು....." ಎಂದು ತಾವು ನಂಬಿಕೊಂಡ ಕಲೆಯ ಸಿದ್ಧಾಂತವನ್ನು ಹೇಳುತ್ತಾರೆ.

ಬಿ.ಕೆ. 'ಬ್ರಿಟಿಷ್ ಸ್ಕೂಲ್ ಆಫ್ ಥಾಟ್ಸ್' ಹಿನ್ನೆಲೆಯಲ್ಲಿ ಬೆಳೆದವರು. ಬ್ರಿಟಿಷ್ ತಂತ್ರಗಳನ್ನು, ರಚನಾತ್ಮಕ ಗುಣಗಳನ್ನು ಅರಿಯಲು ಯತ್ನಿಸಿದವರು. ಅವರು ಯಾವತ್ತು ಇಂಗ್ಲೀಷ್ ಕಲಾವಿದರ ಚಿತ್ರಗಳನ್ನೇ ಮೆಚ್ಚುತ್ತಿದ್ದರು. ಹೀಗಾಗಿ ಬಿ.ಕೆ.ಯವರ ಕೃತಿಗಳು ಬ್ರಿಟಿಷ್ ವಿಚಾರಗಳ ಹಿನ್ನಲೆಯಲ್ಲಿ ಭಾರತೀಯ ಸಂಪ್ರದಾಯವನ್ನು ಬಿಂಬಿಸುವ ಕೃತಿಗಳಾಗಿವೆ. ಅದಕ್ಕೆ ಅವರು ವರ್ಣ ಸಂಯೋಜನೆ, ರೇಖಾ ವಿನ್ಯಾಸಗಳನ್ನು ಹೆಚ್ಚು ಗಮನದಲ್ಲಿಟ್ಟು ಚಿತ್ರ ರಚನೆಯನ್ನು ಮಾಡುವರು.

ಬಿ.ಕೆ.ಹುಬಳಿ ಎಲ್ಲಿ ಹೋಗುತ್ತಾರೋ ಅಲ್ಲಿ ಕಾಗದ, ಪೆನ್ಸಿಲ್ಲು ಕೊಂಡೊಯ್ಯುತ್ತಾರೆ. ತಮ್ಮ ಕಣ್ಣಿಗೆ ಬೀಳುವ ವಿಶಿಷ್ಟ ಮಾನವ ಸ್ವಭಾವಗಳನ್ನು, ನಿಸರ್ಗ ರಮ್ಯತೆಯನ್ನು, ಪಕ್ಷಿ ಪ್ರಾಣಿಗಳ ನಡವಳಿಕೆಯನ್ನು ಸರಸರನೆ ಕಾಗದದ ಮೇಲೆ ಇಳಿಸಿಯೇ ಬಿಡುತ್ತಾರೆ. ಹೀಗೆಯೇ ಒಂದು ಘಟನೆಯನ್ನು ಹೇಳುತ್ತಾರೆ. ಬಿ.ಕೆ.ಹುಬಳಿ ಮತ್ತು ವಿ.ಬಿ.ಹಿರೇಗೌಡರು ಸೇರಿ ವಿರಮಿಸಿರುವಾಗ ದೂರದಲ್ಲಿ ಒಬ್ಬ ಲಂಬಾಣಿ ಮಹಿಳೆ ಕಾಲು ಚಾಚಿ ಕೂತುಬಿಟ್ಟಳು. ಬಿ.ಕೆ.ಯವರ ಕಲಾನೋಟ ಆ ಭಂಗಿಯಲ್ಲಿ ವಿಶಿಷ್ಟ ಭಾವ ಕಂಡಿತು. ಗೆರೆಗಳ ಮೋಡಿಯಲ್ಲಿ ಲಂಬಾಣಿ ಹೆಣ್ಣು ಮೈ ತಳೆದಳು. ಅದನ್ನು ನೋಡಿ ಅಚ್ಚರಿಪಟ್ಟ ಹಿರೇಗೌಡರು ತನಗೇ ಕೊಡಬೇಕೆಂದು ಕೇಳಿ ಪಡೆದರು. ಬಿ.ಕೆ., ಹಿರೇಗೌಡರಿಗೆ 'ಸಿಗ್ನೇಚರ' ಹಾಕಿ ಕೊಟ್ಟೇಬಿಟ್ಟರು. ಇಂದು ಅದು ಹಿರೇಗೌಡರ ಸಂಗ್ರಹದಲ್ಲಿದೆ. ಹೀಗೆ ಕಲಾವಿದನ ಕಣ್ಣಿಗೆ ಗೋಚರಿಸುವ ವಿಷಯ-ವಸ್ತುಗಳನ್ನು ಬಿ.ಕೆ. ತಮ್ಮ ಕಲೆಗೆ ತಂದುಕೊಂಡಿದ್ದಾರೆ.

ಹುಬಳಿಯವರ ರೇಖೆಗಳಿಗೆ ಜೀವತ್ವವಿದೆ. ಮಾದಕತೆ ರೇಖೆಯಲ್ಲಿ ಮಡುಗಟ್ಟಿದೆ. ಲಯಕ್ಕೆ ಹೆಚ್ಚಿಗೆ ಪ್ರಾಮುಖ್ಯತೆ ನೀಡುತ್ತಾರೆ. ಹುಬಳಿಯವರು ಎದುರಿನ ವಸ್ತುವನ್ನು ತಕ್ಷಣ ಗ್ರಹಿಸಿ ಕೆಲವೇ ಸಮಯದಲ್ಲಿ ಅದನ್ನು ಒಡಮೂಡಿಸುವ ಸಾಮರ್ಥ್ಯ ಹೊಂದಿದವರು. ತಾವು ಅಭಿವ್ಯಕ್ತಿಸುವ ವಸ್ತುವೂ ಕೂಡ ಅವರ ರೇಖಾ ಚಲನೆಯಲ್ಲಿ ಅನುಭವದ ಗಟ್ಟಿತನವನ್ನು ಪಡೆಯುತ್ತದೆ.

೧೯೫೩ರಿಂದ ಅವರು ರಚಿಸಿದ ರೇಖಾಚಿತ್ರಗಳ ದೊಡ್ಡ ಸಂಕಲನವೇ ಅವರ ಬಳಿ ಇದೆ. ಅವುಗಳನ್ನು ತೀವ್ರ ಆಸ್ಥೆಯಿಂದ ಕಾಪಾಡಿಕೊಂಡು ಬಂದರೂ ಕೆಲವು ಉತ್ಕೃಷ್ಟ ಕೃತಿಗಳು ಅವರಿವರ ಮನೆಗಳನ್ನು ಪುಕ್ಕಟ್ಟೆಯಾಗಿ ಸೇರಿವೆ. ಬಿ.ಕೆ.ಯವರ ಸ್ವಭಾವ ಹಣ ಕೇಳುವಂಥದ್ದಲ್ಲ. ಹಣ ಕೊಟ್ಟರೂ ಅವರು ಕೊಟ್ಟಷ್ಟು ಪಡೆದು ಸಂತೃಪ್ತಗೊಳ್ಳುವ ದೊಡ್ಡ ಗುಣ. ಅವರ ದೊಡ್ಡ ಗುಣದ ಲಾಭ ಪಡೆದವರೂ ಇದ್ದಾರೆ.

ಮಾನವ ದೇಹ ವಿನ್ಯಾಸ (Anatomy)ದ ಮೇಲೆ ಅಪೂರ್ವ ಹಿಡಿತವಿರುವ ಬಿ.ಕೆ.ಅವರು ಮನುಷ್ಯನ ಹಲವು ವಿಭಿನ್ನ ಭಾವ ಭಂಗಿಗಳನ್ನು ಅವನ ಸ್ವಭಾವ, ನಡವಳಿಕೆ, ವ್ಯಾಪಾರ, ವ್ಯವಹಾರ, ಸಂಸಾರದ ವಿವಿಧ ಮಗ್ಗುಲಗಳನ್ನು ಸೂಕ್ಷ್ಮವಾಗಿ ಗಮನಿಸುತ್ತ ತಮ್ಮ ರೇಖೆಗೆ ಅಭಿವ್ಯಕ್ತಿಯಾಗಿ

ತಂದುಕೊಂಡಿದ್ದಾರೆ. ಸಂತೆಯಲ್ಲಿ ಚಿಂತೆ ಮಾಡುತ್ತ ಗಂಟುಕಟ್ಟಿಕೊಂಡು ಕುಳಿತ ಮಹಿಳೆ, ಗದ್ದೆಯಲ್ಲಿ ಬುಟ್ಟಿ ಹೊತ್ತ ಯೌವ್ವನೆ, ಕೊಡ ಹೊತ್ತು ಸಾಗುವ ವನಿತೆಯರು, ರಾಧೆ ಕೃಷ್ಣರ ಪ್ರೇಮಾಲಾಪ, ಸತ್ಯವಾನ ಮತ್ತು ಸಾವಿತ್ರಿ ಪ್ರಸಂಗ, ಮಗುವಿಗೆ ಹಾಲುಣ್ಣಿಸುವ ತಾಯಿ, ತುಂಬಿದೆದೆಯ ಚೆಲುವೆ, ಪ್ರಿಯಕರನ ನಿರೀಕ್ಷೆಯಲ್ಲಿ ಕಾದು ಕುಳಿತ ಜವ್ವನೆ ಹೀಗೆ ಹಲವಾರು ವಿಷಯಗಳನ್ನು ತಮ್ಮ ರೇಖೆ ಮತ್ತು ಲಯದ ತಕ್ಕೆಗೆ ಒಲಿಸಿಕೊಂಡಿದ್ದಾರೆ. ತಾನು ಕಂಡ ದೃಶ್ಯಸಂಕುಲವನ್ನು ಕಲ್ಪನೆಯ ಕಾವ್ಯದೊಂದಿಗೆ ರಚಿಸುವುದು ಹುಬಳಿಯವರ ಮೂಲ ಗುಣ.

ಬಿ.ಕೆ.ಯವರ ಕಲಾಮೂಸೆಯಲ್ಲಿ ಅರಳಿದ 'ಪೊರ್ಟ್ರೇಟ್'ಗಳು ಭಾವ ಚಿಮ್ಮಿಸುವ ಕೃತಿಗಳು. ರೇಖೆಗಳಲ್ಲಿ ಅವರು ಹೆಚ್ಚಾಗಿ ಸ್ತ್ರೀ ಭಾವ ಚಿತ್ರಗಳನ್ನೇ ರಚಿಸಿದ್ದಾರೆ. ಎದುರು ರೂಪದರ್ಶಿ ಇಟ್ಟುಕೊಂಡು ರಚನೆಮಾಡಿದ ಲಯಬದ್ಧವಾದ ರೇಖಾಚಿತ್ರಗಳು ಒಟ್ಟು ಆಯಾ ವ್ಯಕ್ತಿಗಳ ಒಡಲಾಳದ ಇಂಗಿತವನ್ನು, ಕಣ್ಣಲ್ಲಿ ಚಿಮ್ಮುವ ಭಾವವನ್ನು ಅಳೆದು ಅಭಿವ್ಯಕ್ತಿಸಿದಂತೆ ರಚಿತವಾಗಿವೆ. ಅರಳಿದ ತುಟಿ, ಹೊಳೆವ ಕಣ್ಣು, ಆ ನೋಟ ಒಂದೊಂದು ಅರ್ಥಪೂರ್ಣ ಕಾವ್ಯದ ಹಾಗೆ. ಕುಳಿತ ಬಗೆಬಗೆಯ ಭಂಗಿಗಳು, ನಿಂತು ನಿರೀಕ್ಷೆಯ ಶೈಲಿಯ ಹುಡುಗಿ, ಹಾಯಾಗಿ ನಿಶ್ಚಿಂತರಾಗಿ ಹಾಸಿಗೆಗೆ ಮೈ ಚೆಲ್ಲಿದ ನೀರೆಯರು; ಇಂಥ ರಸವತ್ತಾದ ಪ್ರಸಂಗಗಳನ್ನು ಹುಬಳಿ ರೇಖೆಗಳಲ್ಲಿ ಸತ್ವಯುತವಾಗಿ ಬಳಸಿಕೊಂಡಿದ್ದಾರೆ. ಕಲಾತ್ಮಕವಾದ ಪ್ರಯೋಗ ಗುಣಗಳನ್ನು ಹೇರಳವಾಗಿ ತಮ್ಮ ರೇಖಾ ಚಿತ್ರಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ಅವರು ಹೇಳುವಂತೆ 'ರೇಖೆ' ಒಂದು ಕೃತಿಯ ಆತ್ಮ ಇದ್ದಹಾಗೆ ಎನ್ನುವ ಮಾತು ದಿಟವೆನಿಸುತ್ತದೆ.

## ಜಲವರ್ಣ ಕೃತಿಗಳು

ಕಲಾಗುರುಗಳಾದ ಪವಾರರಿಂದ ಜಲವರ್ಣ ದೀಕ್ಷೆ ಪಡೆದ ಬಿ.ಕೆ. ಹುಬಳಿಯವರು ಆ ಪ್ರಕಾರದಲ್ಲಿ ಅದ್ಭುತ ಸಾಧನೆ ಮಾಡಿದ ಅಪರೂಪದ ಕಲಾವಿದರು. ಜಲವರ್ಣ ಪ್ರಕಾರದಲ್ಲಿ ಕೃತಿ ರಚಿಸುವುದು ಅವರಿಗೆ ಹೆಚ್ಚು ಪ್ರಿಯವಾದ ಕೆಲಸ. ಅಕಾಡೆಮಿಕ್ ಶೈಲಿಯನ್ನು ರೂಢಿಸಿಕೊಂಡು ಬಂದ ಕಲಾವಿದರಲ್ಲಿ ಇವರೂ ಪ್ರಮುಖರು. ಅದರಲ್ಲೂ 'ವಾಶ್ ಡ್ರಾಯಿಂಗ್' ಚಿತ್ರರಚನೆ ಅವರ ಸಾಧನೆಯ ಇನ್ನೊಂದು ಹೆಗ್ಗಳಿಕೆ. ಕಾಗದದ ಮೇಲೆ

ಜಲವರ್ಣಗಳನ್ನು ತೆಳುವಾಗಿ ಪ್ರಯೋಗಿಸಿ ಅಭಿವ್ಯಕ್ತಿಗೆ ತಂದುಕೊಂಡ ವಿಷಯವನ್ನು ಒಂದೊಂದಾಗಿ ಬಿಚ್ಚಿಡುವ ಹುಬಳಿಯವರು ಈ ಪ್ರಕಾರದಲ್ಲಿ ಬಿಳಿ ಬಣ್ಣವನ್ನು ಬಳಸುವುದಿಲ್ಲ. ವರ್ಣದ ಬಿಳುಪನ್ನು ಕುಂಚದಿಂದಲೇ ನಿಯಂತ್ರಿಸುವುದನ್ನು ಕರಗತ ಮಾಡಿಕೊಂಡಿದ್ದಾರೆ.

ಹೆಚ್ಚಾಗಿ ರೂಪದರ್ಶಿಗಳನ್ನು ಬಳಸಿ ರಚಿಸಿದ ಚಿತ್ರಕೃತಿಗಳ ಸಂಖ್ಯೆಯೇ ಜಾಸ್ತಿಯಾಗಿದೆ. ಸ್ತ್ರೀಯರ ವೈವಿಧ್ಯಮಯ ನಿತ್ಯ ಚಟುವಟಿಕೆ ಅವರ ಕಲೆಗೆ ಹೂರಣ. ವೀಣೆ ನುಡಿಸುವ ಸುಂದರಿಯ ಜಲವರ್ಣ ಕೃತಿ ವರ್ಣ ಪ್ರಯೋಗ ಮತ್ತು ರೇಖೆಯ ಲಯದ ಮೇಲಿನ ಸಾಧನೆಯ ಪ್ರತೀಕವಾಗಿದೆ. ಕಣ್ಮುಚ್ಚಿ ತನ್ಮಯಳಾಗಿ ತನ್ನ ಚಿಗುರು ಬೆರಳುಗಳಿಂದ ವೀಣೆ ನುಡಿಸುತ್ತ ಕುಳಿತ ಭಂಗಿ ರಮ್ಯವಾಗಿದೆ. ಸ್ನಿಗ್ಧ ಮೈ ಬಣ್ಣ ಕಣ್ಣಿಗೆ ನುಣುಪಾದ ಬೆಣ್ಣೆಯ ಸ್ಪರ್ಶ ಕೊಡುತ್ತದೆ. ವೀಣೆಯ ನುಡಿಸುವ ಶೈಲಿ ಕಲಾತ್ಮಕ. ಭಿತ್ತಿಯ ಆವರಣವು ಅತ್ಯಂತ ಸಹಜತೆಯಿಂದ ವಾಸ್ತವ ನೆಲೆಯಲ್ಲಿದ್ದು, ಕೃತಿಗೆ ಗಟ್ಟಿತನ ತಂದಿದೆ.

ಶುಭ್ರ ಹಾಸಿಗೆಯಲ್ಲಿ ಎದೆ ಬಿಚ್ಚಿ ಮೈ ಚೆಲ್ಲಿದ ಚೆಲುವೆ ಯುವತಿ ಹೃನ್ಮನಗಳಲ್ಲಿ ಬಹಳಷ್ಟು ಕಾಲ ಕಾಡುತ್ತಾಳೆ. ತಲೆಗೆ ಕೈಯೊಡ್ಡಿ ಕಣ್ಮುಚ್ಚಿ ಮಲಗಿದ ಆಕೆಯ ಕನಸುಗಳಿಗೆ ಹಲವು ಅರ್ಥಗಳು ರೂಪತಳೆಯುತ್ತವೆ. ಜಲವರ್ಣದಲ್ಲಿ ಮೂಡಿದ ಈ ಕೃತಿ ಬಿ.ಕೆ.ಯವರ ಕಲಾಪ್ರೌಢಿಮೆಯನ್ನು ಸಾಬೀತುಪಡಿಸುತ್ತದೆ.

'ನಾದತರಂಗಿಣಿ' ತಲೆಬರಹದ ಜಲವರ್ಣ ಕೃತಿ ಅವರಿಗೆ ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಶಸ್ತಿಯನ್ನು ತಂದುಕೊಟ್ಟಿತು. ಬೆನ್ನಿಗೆ ನೀಳ್ಜಡೆಗಳನ್ನು ಇಳಿಬಿಟ್ಟ ಯುವತಿ ವೀಣೆ ನುಡಿಸುತ್ತ ಬೆನ್ನು ತೋರಿ ಕುಳಿತಿದ್ದಾಳೆ. ಈ ಕೃತಿಯಲ್ಲಿ ಜಲವರ್ಣದಲ್ಲಿ ಬಿ.ಕೆ.ಯವರ ವರ್ಣ ಬಳಕೆಯ ನಿರ್ವಹಣೆ ಬೆರಗುಗೊಳಿಸುತ್ತದೆ. ಕೂದಲಿನ ಹೊಳಪು, ಬಟ್ಟೆಯಲ್ಲಿ ಒಡಮೂಡಿದ ತಾಜಾತನ, ಬಿಳಿ ಹಾಸಿಗೆ ಮತ್ತು ಹಿನ್ನೆಲೆಯ ಆಹ್ಲಾದಕರ ಆವರಣ ಎಂಥವರನ್ನೂ ಮುದಗೊಳಿಸುತ್ತದೆ. ಇದು ಅವರ ಶ್ರೇಷ್ಠ ಕೃತಿಗಳಲ್ಲಿ ಒಂದಾಗಿದೆ.

ಜಲವರ್ಣದಲ್ಲಿ ಬಿ.ಕೆ.ಯವರ ಕೆಲವು 'ನ್ಯೂಡ್' ಕೃತಿಗಳು ಸೆಳೆಯುತ್ತವೆ. ಪುಟ್ಟದಾದ ಕಾಗದದ ಅಳತೆಯಲ್ಲಿ ಮೂಡಿದ ಚೆಲುವೆಯರು

ತಮ್ಮ ಸ್ನಿಗ್ಧ ಸೌಂದರ್ಯ ಮೈಬಣ್ಣದಿಂದ ಭಾವನೆಗಳಿಗೆ ಲಗ್ಗೆಯಿಡುತ್ತಾರೆ. ತೆಳುವಾಗಿ ಕುಂಚ ಪ್ರಯೋಗಿಸಿ ನೀಡುವ ವರ್ಣಲೇಪನ ಕೃತಿಯ ಮೌಲ್ಯವನ್ನು ವೃದ್ಧಿಗೊಳಿಸುತ್ತದೆ. ಪೌರಾಣಿಕ ಆಶಯದ ಹಲವಾರು ಕೃತಿಗಳನ್ನು ಕೂಡ ಜಲವರ್ಣದಲ್ಲಿ ಸೆರೆಹಿಡಿದಿದ್ದಾರೆ. ಅದರಲ್ಲಿ ಕೃಷ್ಣ-ರಾಧೆಯರ ವಿಷಯಕ್ಕೆ ಸಂಬಂಧಿಸಿದ ಕೃತಿಗಳು ವಿಪುಲವಾಗಿವೆ. ನಿಸರ್ಗಚಿತ್ರದಲ್ಲಿ ಜಲವರ್ಣ ಪ್ರಯೋಗ ಕಲಾವಿದನಿಗೆ ಒಂದು ಸವಾಲಿದ್ದಂತೆ. ತನ್ನೆದುರು ನಿಂತ ಭೂದೃಶ್ಯವನ್ನು ಕಲಾತ್ಮಕವಾಗಿ ರಚಿಸಬೇಕಾದರೆ ಪ್ರತಿಭೆಯಿದ್ದರೆ ಸಾಲದು, ಜತೆಗೆ ತಂತ್ರ ನೈಪುಣ್ಯತೆ, ಪ್ರೌಢಿಮೆಯೂ ಬೇಕು. ಹಾಗಿದ್ದರೆ ಮಾತ್ರ ನಿಸರ್ಗ ರಮ್ಯತೆಯನ್ನು ಚಿತ್ರಿಸಲು ಸಾಧ್ಯವಾಗುತ್ತದೆ. ಈ ಎಲ್ಲ ಗುಣಗಳನ್ನು ಒಳಗುಮಾಡಿಕೊಂಡ ಬಿ.ಕೆ.ಯವರು ನಿಸರ್ಗದ ಚೆಲುವನ್ನು ಕೃತಿಗೆ ತಂದಿದ್ದಾರೆ. ಹಸುರುಟ್ಟ ಧರೆ, ನೀಲಾಕಾಶದ ಚೆಲುವು, ಗಿರಿ-ಕಂದರ, ಹಳ್ಳ-ಕೊಳ್ಳಗಳು ಬಿ.ಕೆ.ಯವರ ಸೃಜನಶೀಲ ಮೂಸೆಯಲ್ಲಿ ಕಲೆಯಾಗಿ ಹೊರಹೊಮ್ಮಿವೆ.

ಸೂರ್ಯಾಸ್ತದ ಸಂಜೆ ಬಣ್ಣದೋಕುಳಿಯನ್ನೇ ಆಡಿ ನಲಿದು ಸಕಲ ವರ್ಣಗಳನ್ನು ಬಾನಿಗೆ ಹರವಿರುತ್ತದೆ. ಕೆಂದು ಮೋಡಗಳು, ಹೊನ್ನಿನ ಹೊಳಪನ್ನು ಬುವಿಗೆ ಚೆಲ್ಲುತ್ತ ಸಾಗಿದ ಭಾನು ಕೊನೆಗೆ ಕೆಂಡದುಂಡೆಯಾಗಿ ಉರಿ ಉರಿದು ಮುಳುಗುತ್ತಾನೆ. ಕವಿ, ಕಲಾವಿದನಿಗೆ ಸ್ಫೂರ್ತಿಯ ಸೆಲೆಯಾದ ನೈಸರ್ಗಿಕ ಚೆಲುವು ಬಿ.ಕೆ.ಯವರ ಕುಂಚಗಳಲ್ಲಿ ಹಲವಾರು ಕೃತಿಗಳ ರೂಪದಲ್ಲಿ ಅರಳಿ ನಿಂತಿದೆ. ಜಲವರ್ಣವನ್ನು ಅತಿಯಾಗಿ ಮೆಚ್ಚುವ ಬಿ.ಕೆ. ಬಹಳಷ್ಟು ವೈವಿಧ್ಯಮಯ ಕೃತಿಗಳನ್ನು ಈ ಪ್ರಕಾರದಲ್ಲಿ ರಚಿಸಿದ್ದಾರೆ.

## ತೈಲವರ್ಣ

ಬಿ.ಕೆ. ಹುಬಳಿ ನಂಬಿಕೊಂಡ ಕಲೆಯ ಸಿದ್ಧಾಂತ ರೇಖಾ ವಿನ್ಯಾಸ ಪ್ರಧಾನವಾದುದು ಎಂಬ ಮಾತನ್ನು ಹೇಳಬೇಕಾಗುತ್ತದೆ. ರೇಖೆ ತನ್ನ ಲಯದ ಮಿತಿಯಲ್ಲಿ ಅರಳಬೇಕು. ಆಮೇಲೆ ಅದರ ಸುತ್ತಮುತ್ತ ವರ್ಣಗಳು ಮೈದಳೆಯಬೇಕು. ಅವರು ಹೇಳುವ ಹಾಗೆ- 'ರೇಖೆಗಳು ಎಲುಬುಗಳಾದರೆ ವರ್ಣಗಳು ಎಲುಬಿಗೆ ಮೆತ್ತಿಕೊಂಡ ರಕ್ತಮಾಂಸವಿದ್ದಂತೆ. ಅದಕ್ಕೆ ಚಿತ್ರ ರಚನೆಗೆ ಮುನ್ನ ಬಿ.ಕೆ. ತಾನು ರಚಿಸಬೇಕಾದ ವಿಷಯವನ್ನು ಕ್ಯಾನ್‌ವಾಸ್ ಅಥವಾ ಹಾಳೆಯ ಮೇಲೆ ಮೂಡಿಸಿ ಆ ಬಳಿಕ ವರ್ಣಸಂಯೋಜನೆ ಮಾಡಿ

ಕಲೆಗೆ ಜೀವ ತುಂಬುತ್ತಾರೆ. ಆ ಕಾರಣವಾಗಿ ಅವರ ಕೃತಿಗಳು ಬಹಳಷ್ಟು ಕಾಡುತ್ತವೆ. ಮನದಲ್ಲಿ ಬಹುಕಾಲ ಉಳಿಯುತ್ತವೆ.

ಬಿ.ಕೆ.ಯವರ ತೈಲವರ್ಣ ಮಾಧ್ಯಮದ ಕೃತಿಗಳೂ ಸಹ ಮೌಲಿಕವಾದವು. ಜೆ.ಜೆ. ಕಲಾಶಾಲೆಯಲ್ಲಿ ವ್ಯಾಸಂಗ ಮಾಡಿದವರನ್ನು ನೆನಪಿಸುವಂತೆ ಶೈಲಿಯನ್ನು ಬಿ.ಕೆ.ಯವರೂ ಹೊಂದಿದ್ದಾರೆ. ಅಕೆಡೆಮಿಕ್ ನೆರಳಲ್ಲಿ ಸಾಗುವ ಕಲಾಕೃತಿಗಳು. ರೊಮ್ಯಾಂಟಿಕ್ ನೆಲೆಯಲ್ಲಿ ರಚನೆಗೊಂಡ ಕೃತಿಗಳು, ವಸ್ತುವಿನ ಆಯ್ಕೆಯಲ್ಲಿ ಗ್ರಾಮೀಣ ಜನಜೀವನದ ಆಗುಹೋಗುಗಳು ಕಲೆಯ ರೂಪತಾಳಿವೆ. ಬಿ.ಕೆ. ಯವರ ಕಲೆಯ ಜೀವಾಳವೂ ಸಹ ಗ್ರಾಮೀಣರ ಜನಪದೀಯ ಅಂಶದ ಗಾಢ ಅನುಭವವಾಗಿದೆ.

ಬ್ರಿಟಿಷ್ ಕಲಾವಿದರ ಶೈಲಿಯನ್ನು ನೆನಪಿಸುವ ಕೆಲವು ತೈಲವರ್ಣ ಕೃತಿಗಳು ಇವರಿಂದ ರಚನೆಗೊಂಡಿವೆ. ಇದಕ್ಕೆ ಕಾರಣವೂ ಇದೆ. ಅವರೇ ಹೇಳುವ ಹಾಗೆ ತಮ್ಮನ್ನು ಇಂಗ್ಲೀಷ್ ಕಲಾವಿದರ ಸಂಗಡ ತೌಲನಿಕವಾಗಿ ಅಧ್ಯಯನಕ್ಕೆ ಒಳಪಡಿಸಿಕೊಳ್ಳುತ್ತಿದ್ದರು. ಹೀಗಾಗಿ ಅವರ ಕೃತಿಯಲ್ಲಿ ಇಂಗ್ಲೀಷರಂತೆ ಸೂಕ್ಷ್ಮ ನಿರ್ವಹಣೆಯನ್ನು ಗಮನಿಸಬಹುದಾಗಿದೆ. ದಿಂಬಿಗೆ ಒರಗಿದ ಹೆಣ್ಣಿನ ಚಿತ್ರದಲ್ಲಿ ಇಂಗ್ಲೀಷ ಕಲಾವಿದರ ಛಾಯೆಯಿದ್ದರೆ, ಗ್ರಾಮೀಣ ಮಹಿಳೆಯ ತೆರೆದೆದೆಯ ನಗ್ನ ಕೃತಿಯಲ್ಲಿ ಹಳ್ಳಿಯ ಬದುಕಿನ ಸೊಗಡಿದೆ. ಮರಕ್ಕೆ ಆಧಾರವಾಗಿ ನಿಂತ ಚೆಲುವೆಯ ಮೈಮಾಟ, ಕಣ್ಣುನೋಟ, ಮುಖದ ಭಾವದ ಅರ್ಥವೈಶಾಲ್ಯತೆ, ತುಂಬುಗಲ್ಲದ ಆಕೆಯ ಮುಗ್ಧತನ ಎಲ್ಲವೂ ರಮ್ಯತೆಯ ರಸಾನುಭವ ಕೊಡುತ್ತವೆ.

ಮರದ ನೆರಳಲ್ಲಿ ದುಡಿದು ವಿರಮಿಸಿದ ಇಬ್ಬರು ಯುವತಿಯರಲ್ಲಿ ಒಬ್ಬಳು ಕಪ್ಪು ಚೆಲುವೆಯಾದರೆ, ಇನ್ನೊಬ್ಬಳು ಶ್ವೇತಸುಂದರಿ. ಇಲ್ಲಿ ಕಲಾವಿದ ಎರಡು ಭಿನ್ನ ಸಂಸ್ಕೃತಿಯ ಒಳನೋಟಗಳನ್ನು ಹಿಡಿದಿಟ್ಟಿದ್ದಾರೆ. ಕಪ್ಪು ಚೆಲುವೆ ಬೆತ್ತಲೆಯಾಗಿ ಕುಳಿತಿದ್ದಾಳೆ. ಅವಳ ಪಕ್ಕದಲ್ಲಿ ಶ್ವೇತವರ್ಣೆ ಮಲಗಿದ್ದಾಳೆ. ಹತ್ತಿರವೊಂದು ಖಾಲಿ ಬುಟ್ಟಿ ಬಿದ್ದುಕೊಂಡಿದೆ. ಹಿನ್ನಲೆಯಲ್ಲಿ ನಿಸರ್ಗದ ಚಿತ್ತಾರ, ಕಲ್ಲು, ಬಂಡೆ, ಮರಗಳ ಹಸಿರು, ನೀಲಾಕಾಶ. ಕಣ್ಣು ಮತ್ತು ಮನಸ್ಸಿಗೆ ಈ ಕೃತಿಗಳು ರಸಾನುಭವ ಕೊಡುತ್ತವೆ.

'ಮೈ ಮುರಿವ ಚೆಲುವೆಯ' ತೈಲಕೃತಿಯಲ್ಲಿ ಗುಡಿಸಲ ಬಾಗಿಲಲ್ಲಿ

ನಿಂತ ಮೈ ತುಂಬಿದ ಹೆಣ್ಣು ಸಣ್ಣದಾಗಿ ಮೈ ಮುರಿದು ಹರೆಯದ ಕಾಮನೆಗಳಿಗೆ ಅರ್ಥಪೂರ್ಣ ವ್ಯಾಖ್ಯಾನವಾಗಿದ್ದಾಳೆ. ಗುಡಿಸಲಿನೊಳಗಿನ ಆವರಣ ಗ್ರಾಮ್ಯ ಸಂಸ್ಕೃತಿಯ ಕಲಾರೂಪವೆತ್ತಂತಿದೆ. ಗೋಡೆಯ ಮೇಲಿನ ವಿನ್ಯಾಸ, ಮಣ್ಣಿನ ಮಡಕೆ, ತೂಗುಬಿದ್ದ ಲ್ಯಾಂಟಿನು ಹಾಗೂ ಎದುರು ನಿಸರ್ಗದ ಚಿತ್ರಣವು ಸೊಗಸಾಗಿ ಕಲಾವಿದ ಬಿ.ಕೆ.ಯವರಿಂದ ನಿರ್ವಹಣೆಗೊಂಡಿದೆ.

ಅಖಿಲ ಭಾರತ ಮಟ್ಟದ ಕಲಾಶಿಬಿರ ಇತ್ತೀಚಿಗೆ ಕಲಬುರ್ಗಿಯಲ್ಲಿ ಜರುಗಿತು. ಶರಣಬಸಪ್ಪ ಅಪ್ಪನವರ ನೇತೃತ್ವದ ಈ ಶಿಬಿರದಲ್ಲಿ ಬಿ.ಕೆ. ಯವರು ಬಿಡಿಸಿದ 'ಶರಣರ ದಾಸೋಹ ಮೇಳ'ದ ತೈಲಚಿತ್ರ ಎಲ್ಲರ ಗಮನ ಸೆಳೆಯಿತು. ಶರಣರ ಕಥಾವಸ್ತುವನ್ನು ಆಧರಿಸಿ ರಚನೆಗೊಂಡ ಈ ಕೃತಿಯಲ್ಲಿ ಇಡೀ ಕತೆಯೇ ಅಡಕವಾಗಿದೆ. ಇದು ಬಿ.ಕೆ. ಹುಬಳಿಯವರಿಗೆ ತೃಪ್ತಿ ನೀಡಿದ ಕೃತಿಯಾದರೆ; ಸ್ವತಃ ಶರಣಬಸಪ್ಪ ಅಪ್ಪನವರಿಗೂ ತೀರಾ ಅಚ್ಚುಮೆಚ್ಚು. ಈ ಕೃತಿ ಶರಣರ ಕತೆ ಹೇಳುವ ಚಿತ್ರಕಾವ್ಯವೇ ಸರಿ.

ಬಿ.ಕೆ. ಹುಬಳಿಯವರ ಚಿತ್ರ ಕಾವ್ಯಕ್ಕೆ ದೈನಂದಿನ ಬದುಕಿನ ದೃಶ್ಯಗಳು ವಸ್ತುವಾಗಿವೆ. ಕೊಡ ಹೊತ್ತ ನೀರೆ, ನಾಚಿ ತಲೆಬಾಗಿದ ಭಂಗಿ, ಗುಡಿಸಲು ಎದುರು ಮರಕ್ಕೆ ಆನಿಸಿ ನಿಂತ ಮಹಿಳೆ, ತಬಲಾವಾದಕಿ ಹಾಗೂ ನೃತ್ಯಗೈಯುವ ಸ್ತ್ರೀ, ಕಚ್ಚೆಪಂಚೆ ಸೀರೆ ಉಟ್ಟು ವೈಯ್ಯಾರದಿಂದ ಹೆಜ್ಜೆಯಿಡುತ್ತಿರುವ ಗೆಳತಿಯರು, ನೆಲಕ್ಕೆ ಮೈಒಡ್ಡಿ ಪ್ರಿಯಕರನ ಪ್ರೇಮಪತ್ರ ಓದುವುದರಲ್ಲಿ ತಲ್ಲೀನಳಾದ ಪ್ರೇಯಸಿ, ಬುಟ್ಟಿ ಹೊತ್ತು ಗದ್ದೆಗೆ ಕೆಲಸಕ್ಕೆ ಅಣಿಯಾದ ಕಪ್ಪು ಚೆಲುವೆ, ಹೀಗೆ ಹತ್ತು ಹಲವು ನಿತ್ಯದ ಹಳ್ಳಿಯ ಬದುಕು ಅವರ ಸೃಜನಶೀಲ ಕಲೆಯಲ್ಲಿ ಕಲಾವಂತಿಕೆಯನ್ನು ಪಡೆದಿದೆ.

ವೈಶಿಷ್ಟ್ಯವೆಂದರೆ ಬಿ.ಕೆ. ಹುಬಳಿಯವರ ಕಲೆಯ ಕೇಂದ್ರ ವ್ಯಕ್ತಿ ಸ್ತ್ರೀಯಾಗಿರುವುದು. ಕಲಾವಿದ ಮನಸ್ಸು ಸ್ತ್ರೀಯರ ಚೆಲುವನ್ನು ತನ್ನ ಅಭಿವ್ಯಕ್ತಿಗೆ ಇಲ್ಲಿ ಆಯ್ದುಕೊಂಡಿದೆ. ಹೀಗಾಗಿ ಅವರ ರೇಖಾಚಿತ್ರ, ಜಲವರ್ಣ ಮಾಧ್ಯಮ ಮತ್ತು ತೈಲವರ್ಣ ಪ್ರಕಾರಗಳಲ್ಲಿ ಮಹಿಳೆಯೇ ಮುಖ್ಯ ವಸ್ತುವಾಗಿದ್ದಾಳೆ. ಅವಳ ಎಲ್ಲ ಸ್ವಭಾವಗಳನ್ನು ಕೃತಿಗಿಳಿಸಿದ್ದಾರೆ. ನಯ, ನಾಜೂಕು, ಲಜ್ಜೆ, ತಾಯ್ತನ, ಪ್ರೇಮ, ಸೌಂದರ್ಯತನವನ್ನು ಮೈಗೂಡಿಸಿಕೊಂಡ ಚೆಲುವೆಯರು ಅವರ ಚಿತ್ರಗಳಲ್ಲಿ ಸಾಕಷ್ಟು ಸಿಗುತ್ತಾರೆ.

ಸ್ತ್ರೀಪರವಾದ ವಿಚಾರಗಳನ್ನು ಅಭಿವ್ಯಕ್ತಿಸುವ ಕಲಾವಿದರು ಹುಬಳಿಯವರು. ದೊಡ್ಡಗಾತ್ರದ 'ಪೊರ್ಟ್ರೇಟ'ಗಳನ್ನು ರಚಿಸಿದ ಅನುಭವ ಇವರದು.

ಬಿ.ಕೆ. ಯಾವುದೇ ಸಿದ್ಧಾಂತ ಅಥವಾ ಕಲಾಚಳುವಳಿಗಳಿಗೆ ತಲೆಕೊಡದೆ ತಾನು ಅರಿತಿರುವುದನ್ನು, ಎದುರು ಚೆಂದವಾಗಿ ಕಾಣುವುದನ್ನು ಕಲೆಯಲ್ಲಿ ವಾಸ್ತವದ ನೆಲೆಯಲ್ಲಿ ಸೃಜಿಸುತ್ತ ಬಂದವರು. ಜನಸಾಮಾನ್ಯನಿಗೆ ನೇರವಾಗಿ ಸಂವಹನಗೊಳ್ಳುವ ಅವರ ಕೃತಿಗಳು ತೀವ್ರವಾಗಿ ತಟ್ಟುವ ಶಕ್ತಿಯನ್ನು ಹೊಂದಿವೆ. ಕೃತಿ ರಚನೆಗೆ ತೊಡಗುವಾಗ ಸಾಕಷ್ಟು ಸಿದ್ಧತೆಯನ್ನೇ ಮಾಡಿಕೊಳ್ಳುವ ಹುಬಳಿ ಇಂದಿನ ಎಪ್ಪತ್ತಾರರ ಹರೆಯದಲ್ಲೂ ಅದೇ ಉತ್ಸಾಹದಿಂದ ಚಿತ್ರ ರಚನೆ ಮಾಡುತ್ತಾರೆ. ಅವರ ಆರೋಗ್ಯ ಮತ್ತು ಮನಸ್ಸಿಗೆ ಚಿತ್ರಕಲೆ ಸಂಜೀವಿನಿಯಾಗಿಯೇ ಉಳಿದಿರುವುದು ಗಮನಾರ್ಹ ವಿಷಯ.

## ನಾಟ್ಯ, ಸಂಗೀತಪ್ರೇಮಿ

ಹುಬಳಿಯವರ ಕಲೆಯ ಹಿಂದಿರುವ ಶಕ್ತಿಗಳಲ್ಲಿ ಸಂಗೀತವೂ ಒಂದು. ಯಳ್ಳೂರಿನ ಬಾಲ್ಯದ ದಿನಗಳಲ್ಲಿ ಮಾವನವರು ನಾಟಕಗಳಲ್ಲಿ ಅಭಿನಯಿಸುತ್ತಿದ್ದರು. ನಾಟಕತಂಡ ಕರೆಯಿಸಿ ಆಡಿಸುತ್ತಿದ್ದರು. ಲಂಕಾದಹನ, ರಾಜಾ ಹರಿಶ್ಚಂದ್ರ, ಸಂಗ್ಯಾ ಬಾಳ್ಯಾ, ಶ್ರೀ ಕೃಷ್ಣ ಪಾರಿಜಾತ ಮುಂತಾದ ನಾಟಕ, ಬಯಲಾಟಗಳು ಮರಾಠಿ ನಾಟಕಗಳು ಯಳ್ಳೂರಿನಲ್ಲಿ ರಾತ್ರಿ-ಬೆಳಗಾಗುವ ತನಕ ನಡೆಯುತ್ತಿದ್ದವು. ಕೆಲವು ನಾಟಕಗಳ ತಾಲೀಮು ಸಹ ಅಲ್ಲಿ ನಡೆಯುತ್ತಿತ್ತು. ಇದರ ಸಂಸ್ಕಾರ ಬಿ.ಕೆ. ಯವರ ಮೇಲಾಯಿತು. ಮೊದಲೇ ಚಿತ್ರಕಲೆಯ ಹುಚ್ಚು ಹಚ್ಚಿಕೊಂಡಿದ್ದ ಅವರು ನಾಟ್ಯ ಸಂಗೀತವನ್ನು ಜೀವದಷ್ಟೇ ಒಲವಿನಿಂದ ಕಾಣತೊಡಗಿದರು.

ಮುಂದೆ ದೊಡ್ಡ ದೊಡ್ಡ ಸಂಗೀತಗಾರರ ಕಚೇರಿಗಳಿಗೆ ಹೋಗಲಾರಂಭಿಸಿದರು. ಹಿಂದೂಸ್ಥಾನಿ ಸಂಗೀತ ಘರಾಣೆಯ ಎಲ್ಲ ಘಟಾನುಘಟಿಗಳ 'ಲೈವ್' ಸಂಗೀತ ಸಭೆಗಳಿಗೆ ಹಾಜರಾಗಿ ತಮ್ಮ ಸಂಗೀತದ ಅಭಿರುಚಿ ಬೆಳೆಸಿಕೊಂಡರು. ಸಂಗೀತ ಮನಕ್ಕೆ ತೃಪ್ತಿ ಕೊಡುವಷ್ಟು ಬೇರೆ ಇನ್ನಾವುದೇ ಪ್ರಕಾರವು ಕೊಡಲು ಸಾಧ್ಯವಿಲ್ಲ ಎನ್ನುವ ಬಿ.ಕೆ.ಯವರಿಗೆ ತಮ್ಮ ಸೃಜನಶೀಲತೆಗೆ ಸಂಗೀತವು ಪ್ರೇರಣಾದಾಯಕವಾಗಿದೆ ಎನ್ನುತ್ತಾರೆ. "ಚಿತ್ರಕೃತಿಗಿಂತ ಸಂಗೀತ ಬಹು ಬೇಗ ಮನುಷ್ಯನನ್ನು

ಸೆಳೆತದ"... ಎಂದು ನಂಬಿಕೊಂಡ ಬಿ.ಕೆ. ಹುಬಳಿಯವರು ಹಿಂದೂಸ್ಥಾನಿಯ ಖ್ಯಾತ ಗಾಯಕರಾದ ಬಾಲಗಂಧರ್ವ, ಮಾಣಿಕವರ್ಮ, ಪಂಡಿತ ಭೀಮಸೇನ ಜೋಶಿ, ಕುಮಾರ ಗಂಧರ್ವ, ಕಿಶೋರಿ ಅಮೋಣಕರರ ಗಾನ ಶೈಲಿಗೆ, ಕಂಠಮಾಧುರ್ಯಕ್ಕೆ ಸೋತು ಹೋಗಿದ್ದಾರೆ. ವಾದ್ಯಗೋಷ್ಠಿಯಲ್ಲಿ ಹೆಸರಾಂತ ವಯೋಲಿನ್ ವಾದಕ ಗಜಾನನರಾವ ಜೋಶಿ, ವಿಲಾಯತ್ ಹುಸೇನ ಖಾನರ ಸಿತಾರ ನುಡಿಸುವಿಕೆಗೆ ತಲೆದೂಗುವ ಬಿ.ಕೆ.ಯವರು ಇವರೆಲ್ಲರ ಕಾರ್ಯಕ್ರಮಗಳಿಗೆ ಹಾಜರಿದ್ದವರು. ಅವರ ಚಿತ್ರಕಲೆಗೆ ಶಾರೀರದ ಮಾಧುರ್ಯ, ತಂತಿಯಿಂದ ಹೊಮ್ಮಿದ ನಾದತರಂಗಗಳು ಸ್ಫೂರ್ತಿ, ಉತ್ಸಾಹದ ಸೆಲೆಯಾಗಿವೆ.

**ಸುಖಮಯ ಸಂಸಾರ**

ಬಿ.ಕೆ.ಯವರ ಮನೆತನ ಕಲಾವಿದರನ್ನು ಮತ್ತು ಕಲೆಯನ್ನು ಜೋಪಾನವಾಗಿಟ್ಟುಕೊಂಡು ಬಂದು ಪೋಷಿಸಿದ ಮನೆತನವೂ ಹೌದು. ಅಕ್ಕಸಾಲಿಗ ವೃತ್ತಿ ಕಲೆಯನ್ನು ಬಿಟ್ಟು ಹೊರತಾಗಿಲ್ಲ. ಹೀಗಾಗಿ ಅವರ ಮಡದಿಯೂ ಕಲಾವಿದೆ. ಪತಿಗೆ ಪ್ರೋತ್ಸಾಹ, ಪ್ರೇರಣೆ ಸಹಕಾರಿ ಎಲ್ಲವೂ ಆಗಿದ್ದಾರೆ. ಇವರು ನಾಲ್ಕು ಗಂಡು, ಒಂದು ಹೆಣ್ಣು ಸಂತಾನದ ಮಾತಾ-ಪಿತೃರು. ಹಿರಿಯ ಮಗ ಹೇಮಂತ ಸರಕಾರಿ ಉದ್ಯೋಗದಲ್ಲಿದ್ದರೆ, ಸುಮಂತ ಮನೆತನದ ಪತ್ತಾರಕಿ ವೃತ್ತಿಯನ್ನು ನಡೆಸಿಕೊಂಡು ಹೊರಟಿದ್ದಾರೆ. ಜಯಂತ ತಂದೆಯ ದಾರಿಯನ್ನು ಹಿಡಿದ ಪ್ರತಿಭಾವಂತ ಕಲಾವಿದರು. ಬೆಂಗಳೂರಿನ ಖಾಸಗಿ ಕಂಪನಿಯೊಂದರಲ್ಲಿ ಉದ್ಯೋಗದಲ್ಲಿರುವ ಜಯಂತ ಚಿತ್ರಕಲಾವಿದನಾಗಿ ಬೆಳೆಯುವ ಎಲ್ಲ ಲಕ್ಷಣಗಳನ್ನು ಒಳಗು ಮಾಡಿಕೊಂಡಿದ್ದಾರೆ. ಮೈಸೂರಿನ 'ಕಾವಾ' ಮತ್ತು ಬೆಂಗಳೂರಿನಲ್ಲಿ ಫೈನ್ ಆರ್ಟಿನ ಪದವಿ ಪಡೆದ ಜಯಂತ ತಂದೆಯ ಆಸೆಯ ಬೆಳಕಾಗಿದ್ದಾರೆ. ಮಗಳು ಅಶ್ವಿನಿ ಮದುವೆಯಾಗಿ ತುಂಬು ಜೀವನ ನಡೆಸುತ್ತಿದ್ದಾರೆ. ಉಳಿದ ಎಲ್ಲ ಗಂಡು ಮಕ್ಕಳು ಲಗ್ನವಾಗಿದ್ದಾರೆ. ಬಿ.ಕೆ. ದಂಪತಿಗಳು ಮಕ್ಕಳು, ಸೊಸೆಯಂದಿರು ಮತ್ತು ಮೊಮ್ಮಕ್ಕಳ ಮಮತೆಯ ಮಡಿಲಿನಲ್ಲಿ ಸುಖಮಯ ಬದುಕನ್ನು ಅನುಭವಿಸುತ್ತಿದ್ದಾರೆ.

**ಸಮಕಾಲೀನ ಕಲೆ-ವಿಚಾರಗಳು**

ಬಿ.ಕೆ. ಹುಬಳಿ ಕಲೆ ಮತ್ತು ಕಲಾಸಕ್ತರ ನಿರ್ಮಿತಿಯಲ್ಲಿ ಬಹು ದೊಡ್ಡ

ಕಾರ್ಯ ನಿರ್ವಹಿಸಿದ್ದಾರೆ. ಬದುಕಿನಲ್ಲಿ ಕಲೆಯನ್ನು ಅವರು ಆತ್ಮಸಾತ್ ಮಾಡಿಕೊಂಡವರು. ಕಲೆಯ ಸಾಧನೆ ಒಂದು ತಪಸ್ಸಿನಂತೆ ಎಂದು ನಂಬಿದವರು. ಸಮಕಾಲೀನ ಕಲೆಯ ಸಂದರ್ಭದಲ್ಲಿ ತಮ್ಮ ಹಲವು ವಿಚಾರಗಳನ್ನು ಹೇಳುತ್ತಾರೆ.

ಸಾಹಿತ್ಯ ಮತ್ತು ಸಂಗೀತ ಮನುಷ್ಯನನ್ನು ಬಹು ತೀವ್ರವಾಗಿ ಸೆಳೆಯುವ ಪ್ರಕಾರಗಳು. ಚಿತ್ರಕಲೆ ಹಾಗಲ್ಲ. ಕಲೆ ಪ್ರಾಚೀನ ಕಾಲದಿಂದಲೂ ಜನಮನ್ನಣೆ ಪಡೆಯದೆ ಒಂದು ವರ್ಗದ ನೆರಳಲ್ಲಿ ಬೆಳೆದು ಇವತ್ತು ಅದು ಸಾಮಾನ್ಯನ ಒಲವನ್ನು ತನ್ನತ್ತ ಮೂಡುವ ಹಾಗೆ ಮಾಡಿದೆ. ಇಂದಿನ ಮಾಧ್ಯಮಗಳಲ್ಲಿಯ ಬೆಳವಣಿಗೆ ಕಲೆಯ ಪ್ರಸರಣಕ್ಕೆ ಕಾರಣವೂ ಹೌದು. ಸಂಗೀತ ಮತ್ತು ಸಾಹಿತ್ಯದಂತೆ ಕಲೆಯೂ ಜನಸಮೂಹವನ್ನು ಹೆಚ್ಚೆಚ್ಚು ತಲುಪಬೇಕೆಂದು ಹುಬಳಿ ಅಭಿಪ್ರಾಯಪಡುತ್ತಾರೆ.

ಸಂಗೀತ ಸಾಧನೆಗಾಗಿ ಶಿಷ್ಯ ವರ್ಷಗಟ್ಟಳೆ ತನ್ನ ಗುರುವಿನ ಬಳಿ ಕಳೆಯುತ್ತಾನೆ. ಅದೇ ರೀತಿ ಕಲಾವಿದ ಕಲೆಯನ್ನು ಒಂದು ತಪಸ್ಸಿನ ಹಾಗೆ ಸ್ವೀಕರಿಸಬೇಕು. ಆಗ ಮಾತ್ರ ಕಲೆ ಸಿದ್ಧಿಸುತ್ತದೆ. ಆತನೊಬ್ಬ ಪರಿಪೂರ್ಣ ಕಲಾವಿದನಾಗಲು ಸಾಧ್ಯವಿದೆ ಎನ್ನುತ್ತಾರೆ. ಕಲೆಯಲ್ಲಿ ಕಲಾವಿದ ಏಕರೂಪನಾಗಬೇಕು. ಆಗ ಉತ್ಕೃಷ್ಟ ಕೃತಿ ರಚನೆಗೊಳ್ಳುತ್ತದೆ.

ಕಲಾವಿದರು ಸಮಾಜ ವಿಮುಖಿಗಳಾಗುವುದನ್ನು ಹುಬಳಿ ಸಹಿಸುವುದಿಲ್ಲ. ಜನಸ್ಪಂದನೆ ಕಲಾವಿದನ ವಿಚಾರವಾಗಬೇಕು. ಅವರು ಸಮಾಜದ ಜತೆ ಸಾಗಬೇಕು. ಹಾಗಾಗದೆ, ಚಿತ್ರಕಲಾವಿದರು ತಾವು ಮಾತ್ರ ಬೆಳೆದು ಮುಂದೆ ಬಂದಿದ್ದಾರೆ. ಸಮಾಜವನ್ನು ಜತೆಯಾಗಿ ತೆಗೆದುಕೊಂಡು ಹೋಗುವುದನ್ನು ಮಾಡಲಿಲ್ಲ ಎಂದು ವಿಷಾದಿಸುತ್ತಾರೆ.

ಸಮಕಾಲೀನ ಕಲಾವಿದ ಯಾವ ಸಮಾಜದಲ್ಲಿ ಬದುಕುತ್ತಾನೋ ಆ ಸಮಾಜದ ಒಳನೋಟಗಳನ್ನು ಪಡೆದು ಪ್ರಭಾವಿತನಾಗುತ್ತಾನೆ. ವೈಚಾರಿಕ ಹಿನ್ನೆಲೆಯಲ್ಲಿ ಕೃತಿ ರಚಿಸುತ್ತಾನೆ. ಬಿ.ಕೆ.ಯವರ ಕೃತಿಗಳು ಸಮಕಾಲೀನ ಆಲೋಚನೆಗಳನ್ನು ಅಕೆಡೆಮಿಕ ಶೈಲಿಯಲ್ಲಿ ನಿರೂಪಿತಗೊಳಿಸಿವೆ. ಗ್ರಾಮೀಣ ಪರಿಸರದ ಜೀವನವನ್ನು ಹೆಚ್ಚಾಗಿ ತಮ್ಮ ಕೃತಿಗಳಿಗೆ ಆಯ್ದುಕೊಳ್ಳುವ ಹುಬಳಿಯವರು ಅವರ ಸುತ್ತಲಿನ ಸಾಮಾನ್ಯ ಜನರ ಆಗುಹೋಗುಗಳನ್ನು, ಜೀವನ ಚೈತನ್ಯವನ್ನು, ಜನಪದ ಸಂಸ್ಕೃತಿಯನ್ನು, ಸಾಮಾಜಿಕ ಕ್ರಿಯೆಯನ್ನು ನೈಜರೂಪದಲ್ಲಿ ಇಟ್ಟಿದ್ದಾರೆ.

ಹೊರನೋಟದಲ್ಲಿ ವಾಸ್ತವವಾದಿ ಚಿತ್ರಗಳೆನಿಸಿದರೂ ಆಂತರಿಕ ಚಿಂತನೆ ಪಡೆದ ಕೃತಿಗಳಾಗಿವೆ. ರಸವತ್ತಾದ ಕೃತಿಗಳಲ್ಲಿ ಸುತ್ತಲಿನ ಪ್ರಪಂಚದ ವಿವಿಧ ರಸಗಳಿವೆ, ಭಾವಗಳಿವೆ, ಚಿಂತನೆಗಳಿವೆ. ತುಂಬಾ ಸುದೀರ್ಘ ಕಲಾಪರಂಪರೆ ಹೊಂದಿದ ಭಾರತದಂತಹ ರಾಷ್ಟ್ರದಲ್ಲಿ ಹಲವು ಸಂಸ್ಕೃತಿ ಮತ್ತು ಉಪ ಸಂಸ್ಕೃತಿಗಳ ನಡುವೆ ಬದುಕುವ ಕಲಾವಿದ ಜೀವನವನ್ನು ಗಾಢ ಪ್ರಬುದ್ಧತೆಯಿಂದ ಸ್ವೀಕರಿಸುತ್ತಾನೆ. ಹುಬಳಿಯವರು ಪ್ರಾಮಾಣಿಕವಾಗಿ ಈ ದಿಶೆಯಲ್ಲಿ ಸಾಗಿದ್ದಾರೆ, ಸಾಗುತ್ತಿದ್ದಾರೆ. ಸ್ವಭಾವತಃ ಶಾಂತರು, ನಿಗರ್ವಿಗಳಾದ ಹುಬಳಿ, ಮನುಕುಲ ಏಳ್ಗೆಯು ಕಲಾವಿದನ ಧ್ಯೇಯವಾಗಬೇಕೆಂದು ಚಿಂತಿಸುವವರು. ಮಾನವನ ಪ್ರೀತಿ-ದುಃಖ, ಕಷ್ಟ ಸುಖ, ಸಂತೋಷಗಳ ಸಂಗಡ ಒಬ್ಬ ಕಲಾವಿದನಾಗಿ, ಪ್ರಾಮಾಣಿಕ ಪ್ರಯತ್ನದ ಕಾರ್ಯಕರ್ತನಾಗಿ ಬೆರೆತು ಸಮಾಜದ ಒಳಿತು ತನ್ನ ನಿಜ ಕಾಳಜಿಯಾಗಿ ಅದರೊಟ್ಟೊಟ್ಟಿಗೆ ಇವತ್ತಿಗೂ ಸಾಗಿ ಬರುವಂಥವರು ಹುಬಳಿಯವರು. ಸಮಾಜದಿಂದ ಬೇರ್ಪಡದ ಇಂಥ ಕಲಾಚೇತನ ನಮ್ಮ ಜತೆಯಿರುವುದು ಅತ್ಯಂತ ಸಮಾಧಾನದ ಸಂಗತಿ.

